೩೭೩

# ಗಜೇಶ ಮಸಣಯ್ಯ

ಎಸ್. ಎಸ್. ಭೂಸರಡ್ಡಿ



ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ಮಾರ್ಚ, ೧೯೮೭

ಉಪನ್ಯಾಸ ಗ್ರಂಥಮಾಲೆ

೩೭೩

# ಗಜೇಶ ಮಸಣಯ್ಯ

ಎಸ್. ಎಸ್. ಭೂಸರಡ್ಡಿ




ಪ್ರಸಾರಾಂಗ

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಮಾರ್ಚ್, ೧೯೮೭

ಪ್ರಕಾಶಕರು :

ಎಸ್. ಬಿ. ನಾಯಕ್
ನಿರ್ದೇಶಕರು, ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಪ್ರಥಮ ಮುದ್ರಣ : ೫,೦೦೦ ಪ್ರತಿಗಳು

ಮಾರ್ಚ್, ೧೯೮೭



ಬೆಲೆ : ೫೦ ಪೈಸೆ

ಮುದ್ರಕರು :

ರಾಜಶ್ರೀ ಪ್ರಿಂಟಿಂಗ ಪ್ರೆಸ್
ತಡಕೋಡ ಗಲ್ಲಿ
ಧಾರವಾಡ

# ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯವು ತನ್ನ ಪ್ರಸಾರಾಂಗದ ಮುಖಾಂತರ ಕೈಕೊಂಡು ನಡೆಸುತ್ತಿರುವ ಜ್ಞಾನಪ್ರಸಾರದ ಯೋಜನೆಗಳಲ್ಲಿ ಈ 'ಉಪನ್ಯಾಸ ಗ್ರಂಥಮಾಲೆ' ಅತ್ಯಂತ ಮುಖ್ಯವೂ, ಜನಪ್ರಿಯವೂ ಆಗಿರುವುದು ಹೆಮ್ಮೆಯ ಮಾತಾಗಿದೆ. ವಿಶ್ವವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ನಾಲ್ಕು ಜಿಲ್ಲೆಗಳಲ್ಲಿಯೂ ಉಪನ್ಯಾಸ ಶಿಬಿರಗಳನ್ನು ಏರ್ಪಡಿಸಲಾಗುತ್ತಿದ್ದು, ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ದುಕೊಂಡು, ಶಾಸ್ತ್ರಸಮ್ಮತವಾದ ಸರಣಿಯಲ್ಲಿ, ಜನಸಾಮಾನ್ಯರಿಗೆ ತಿಳಿಯುವ ಶೈಲಿಯಲ್ಲಿ ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ. ವಿಶ್ವವಿದ್ಯಾಲಯದ ಜ್ಞಾನಭಂಡಾರದ ಅಲ್ಪಾಂಶವನ್ನಾದರೂ ಮಹಾಜನರ ಮನೆ ಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ ಪ್ರೋತ್ಸಾಹವೂ ದೊರೆಯುತ್ತಿವೆ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ತಮ್ಮ ಊರುಗಳಲ್ಲಿ ಈ ಉಪನ್ಯಾಸಗಳನ್ನು ಏರ್ಪಡಿಸಲು ವಿಶ್ವವಿದ್ಯಾಲಯಕ್ಕೆ ಬರೆದು ಬಿನ್ನವಿಸಿಕೊಳ್ಳುತ್ತಿರುವುದು ನಿಜವಾಗಿಯೂ ಸಂತೋಷದ ಸಂಗತಿಯಾಗಿದೆ.

ಈ ಜ್ಞಾನಪ್ರಸಾರ ಕಾರ್ಯದಲ್ಲಿ ಭಾಗವಹಿಸುವುದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕ ಒದಗುವು ದಲ್ಲದೆ ಎಂತಹ ವಿಷಯವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭ ಶೈಲಿಯಲ್ಲಿ ಬರವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವುದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೇ ೩೭೨ ಪುಸ್ತಕಗಳು ಪ್ರಕಟ ವಾಗಿವೆ. ಅವು ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿ- ರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಕಗಳು ನಾಲ್ಕು-ಐದು ಮುದ್ರಣಗಳನ್ನು ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ, ಜನಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋ- ಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ಎಸ್. ಜಿ. ದೇಸಾಯಿ
ಕುಲಪತಿಗಳು

# ಅರಿಕೆ

ಬೆಳಗಾಂವ ಜಿಲ್ಲೆಯ ನಿಡಸೋಸಿಯಲ್ಲಿ ದಿ. ೭-೭-೮೩ ರಂದು ಜರುಗಿದ ಕರ್ನಾಟಕ ವಿಶ್ವವಿದ್ಯಾಲಯದ ೩೨೯ನೆಯ ವ್ಯಾಸಂಗ ವಿಸ್ತರಣಾ ಉಪನ್ಯಾಸಮಾಲೆಯ ಅಂಗವಾಗಿ ನಾನು 'ಗಜೇಶ ಮಸಣಯ್ಯ'ವೆಂಬ ವಿಷಯ ಕುರಿತು ಮಾತನಾಡಿದೆ. ಅದರ ವಿಸ್ತೃತ ರೂಪವೇ ಈ ಕಿರು ಕೃತಿಯಾಗಿ ಮೈದಾಳಿದೆ. ಅಂದಿನ ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಪರಮ ಪೂಜ್ಯ ಜಗದ್ಗುರು ನಿಜಲಿಂಗೇಶ್ವರ ಮಹಾಸ್ವಾಮಿಗಳು ಈ ಬಗೆಯ ಅನೇಕ ಅಜ್ಞಾತ ಶಿವಶರಣರನ್ನು ಕುರಿತು ಜನತೆಗೆ ಸರಿಯಾದ ತಿಳುವಳಿಕೆ ಮಾಡಿಕೊಡುವುದು ಅತ್ಯಂತ ಅವಶ್ಯವಾಗಿದೆ. ಈ ದಿಸೆಯಲ್ಲಿ ನಾನು ಮಾಡುತ್ತಿದ್ದ ಸೇವೆಯನ್ನು ಕುರಿತು ಹೃದಯ ವಂತಿಕೆಯ ನಾಲ್ಕು ಪ್ರೋತ್ಸಾಹಕರ ಮಾತುಗಳನ್ನಾಡಿ ಹುರಿ-ದುಂಬಿಸಿದರು. ಅದಕ್ಕಾಗಿ ಪೂಜ್ಯರಿಗೆ ಅನಂತ ಧನ್ಯವಾದ ಗಳನ್ನು ಅರ್ಪಿಸುತ್ತೇನೆ.

ಕಲ್ಯಾಣ ಕ್ರಾಂತಿಯ ಕಾರಣಪುರುಷ ಮಹಾನುಭಾವಿ ಅಣ್ಣ ಬಸವಣ್ಣನವರು ಸ್ಥಾಪಿಸಿದ ಅನುಭವ ಮಂಟಪದಲ್ಲಿ ವಿರಾಜಿಸಿದ ಸುಮಾರು ೩೫೦ ವಚನಕಾರರಲ್ಲಿ ಈಗಾಗಲೇ ಬಸವಣ್ಣ, ಅಕ್ಕಮಹಾದೇವಿ, ಸಿದ್ಧರಾಮ, ಪ್ರಭುದೇವ, ಚೆನ್ನ ಬಸವಣ್ಣ ಮೊದಲಾದವರ ಬಗೆಗೆ ಕನ್ನಡಿಗರಿಗೆ ತಿಳುವಳಿಕೆ ಮಾಡಿಕೊಡಲಾಗಿದೆ. ಇವರ ಸರಿದೊರೆಯಾಗಿ ಕಾರ್ಯ

ಮಾಡಿದ ಅನೇಕ ಅಜ್ಞಾತ ವಚನಕಾರರು ಇನ್ನು ಸಾಕಷ್ಟು ಬೆಳಕಿಗೆ ಬಂದಿಲ್ಲ. ಈ ದಿಸೆಯಲ್ಲಿ ನಾನು ಈ ಕೃತಿಯನ್ನು ಕನ್ನಡಿಗರ ಕೈಗೆ ನೀಡುತ್ತಿದ್ದೇನೆ. ಸೊಲ್ಲಾಪೂರ ಜಿಲ್ಲೆಯ ಅಕ್ಕಲಕೋಟ ತಾಲೂಕಿನ ಕರಜಿಗಿಯವನಾದ ಗಜೇಶ ಮಸಣಯ್ಯ ವಚನವಾಙ್ಮಯಕ್ಕೆ ಸುಮಾರು ೬೬ ವಚನಗಳನ್ನು ಅರ್ಪಿಸಿ ಕೃತಾರ್ಥವಾದ ಪುಣ್ಯಚೇತನ. ಅತ್ಯಂತ ಮೃದು ಮಧುರವಾದ ಭಾವನೆಗಳಿಂದ ಕೂಡಿದ ಈ ವಚನಗಳನ್ನು ಓದುವುದೇ ಒಂದು ಸೊಗಸು. ತನ್ನ ಹೃದಯದಿಂದ ಹೊರಹೊಮ್ಮಿದ ಅನುಭಾವದ ಅಮೃತವನ್ನೇ ಈ ವಚನಗಳ ಮೂಲಕ ಕನ್ನಡಿಗರಿಗೆ ನೀಡಿದ್ದಾನೆ. ಅದನ್ನು ಸವಿದಷ್ಟು ಹೃದಯ ಅರಳುತ್ತದೆ. ಸಂಸ್ಕೃತಿಯ ಸೌರಭ ಸೂಸುತ್ತದೆ. ಏಕದೇವೋಪಾಸನೆಯ ತತ್ತ್ವದ ಸುಗಂಧ ಪರಿಮಳಿಸುತ್ತದೆ. ಯಾರಿಗೂ ಯಾವ ಬಗೆಯ ನೋವಾಗದಂತೆ ವಿಷಯವನ್ನು ಪ್ರತಿಪಾದಿಸುವ ಗಜೇಶ ಮಸಣಯ್ಯ ಎಲೆಯ ಮರೆಯ ಹೂವಿನಂತೆ ತೆರೆಯ ಮರೆಯಲ್ಲಿದ್ದ ಶ್ರೇಷ್ಠ ವಚನಕಾರನೆಂಬುದರಲ್ಲಿ ಸಂದೇಹವಿಲ್ಲ. ಉಪಲಬ್ಧವಾದ ಸಾಹಿತ್ಯದ ಆಧಾರದಿಂದ ಸಾಧ್ಯವಿದ್ದ ಪ್ರಮಾಣ ಗ್ರಂಥಗಳ ಸಹಾಯದಿಂದ ಈ ಕೃತಿಯನ್ನು ರಚಿಸಲಾಗಿದೆ.

ಈ ಬಗೆಯ ನಿರಂತರ ಪ್ರಯೋಜನಕಾರಿಯಾದ ಕಾರ್ಯ ಚಟುವಟಿಕೆಗಳಲ್ಲಿ ತೊಡಗಿದ ಪ್ರಸಾರಾಂಗದ ನಿರ್ದೇಶಕರಾದ ಶ್ರೀ ಎಸ್. ಬಿ. ನಾಯಕರಿಗೂ, ಸಹಾಯಕ ನಿರ್ದೇಶಕರಾದ ಶ್ರೀ ಎಲ್. ಎಮ್. ಗುಡ್ಡೀನ ಅವರಿಗೂ ನನ್ನ ಅನಂತ ಕೃತಜ್ಞತೆಗಳು. ಹಾಗೆಯೇ ಈ ಕೃತಿಯಲ್ಲಿ ಉಲ್ಲೇಖಿಸಲಾದ ವಚನಗಳನ್ನು ಡಾ. ವೀರಣ್ಣ ರಾಜೂರ ಅವರು ಸಂಪಾದಿಸಿದ

'ಗಜೇಶ ಮಸಣಯ್ಯನ ವಚನಗಳು' ಎಂಬ ಕೃತಿಯಿಂದ ಆಯ್ದುಕೊಳ್ಳಲಾಗಿದೆ. ಈ ಸಂದರ್ಭದಲ್ಲಿ ಅವರಿಗೂ ನನ್ನ ಕೃತಜ್ಞತೆಗಳು.

ಈ ಕೃತಿಯ ಹಸ್ತಪ್ರತಿಯನ್ನು ಸಮಗ್ರವಾಗಿ ಅವಲೋಕಿಸಿ ಅಮೂಲ್ಯ ಸಲಹೆಗಳನ್ನಿತ್ತು ಒಂದು ಮೂರ್ತಕ್ಕೆ ತಂದುಕೊಟ್ಟ ಆತ್ಮೀಯರಾದ ಡಾ. ಮಲ್ಲಿಕಾರ್ಜುನ ಲಠ್ಠೆ ಅವರಿಗೆ ಅನಂತ ವಂದನೆಗಳು.

ಈ ಕೃತಿಯಲ್ಲಿ ಎಡೆವಾಯ್ದು ಬಂದ ಲೋಪದೋಷಗಳನ್ನು ಸಹೃದಯರಾದ ಓದುಗರು ಎತ್ತಿತೋರಿಸಿದರೆ ಮುಂದಿನ ಆವೃತ್ತಿಯಲ್ಲಿ ಅವಶ್ಯವಾಗಿ ಸರಿಪಡಿಸಿಕೊಳ್ಳಲಾಗುವುದು.

ಕನ್ನಡ ಅಧ್ಯಯನಪೀಠ,
ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ

**ಪ್ರೊ. ಎಸ್. ಎಸ್. ಭೂಸರಡ್ಡಿ**

# ಪರಿವಿಡಿ



ಗಜೇಶ ಮಸಣಯ್ಯನ ಆರಾಧ್ಯದೇವನಾದ
ಮಹಾಲಿಂಗ ಗಜೇಶ್ವರ ದೇವಾಲಯ, ಕರಜಗಿ



ಮುನವಳ್ಳಿಯಲ್ಲಿಯ ಗಜೇಶ ಮಸಣಯ್ಯನ ಸ್ಮಾರಕ ಮಂದಿರ

# ೧. ಪೀಠಿಕೆ

ಮಾನವಕುಲ ಪಾವನ ಮಾಡಿದ ಜಗತ್ತಿನ ಮಹಾ ಪುರುಷರ ಸಾಲಿನಲ್ಲಿ ಅವಶ್ಯವಾಗಿ ಸೇರತಕ್ಕವರು ಭಕ್ತಿಭಾಂಡಾರಿ, ವಿನಯಭಂಡಾರಿ, ಜ್ಞಾನಭಂಡಾರಿ ಅಣ್ಣ ಬಸವಣ್ಣನವರು. ಅಂತೆಯೇ ಅವರಿಗೆ ಜಗಜ್ಯೋತಿ ಎಂಬ ಹೆಸರು ಅನ್ವರ್ಥಕವಾಗಿ ಬಂದಿದೆ. ಭಾರತೀಯ ಆಧ್ಯಾತ್ಮಿಕ ಚರಿತ್ರೆಯಲ್ಲಿ ವಿಶೇಷವಾಗಿ ಕರ್ನಾಟಕದ ಸಾಂಸ್ಕೃತಿಕ ಇತಿಹಾಸದಲ್ಲಿ ವಿನೂತನ ಸುವರ್ಣ ಮಯ ಅಧ್ಯಾಯ ನಿರ್ಮಿಸಿದ ಕೀರ್ತಿ ಮಹಾನುಭಾವಿ ಅಣ್ಣ ಬಸವಣ್ಣನವರಿಗೆ ಸಲ್ಲುತ್ತದೆ. ಆರ್ಥರ ಮೈಲ್ಸ ಹೇಳಿದಂತೆ ಅವರು ಭಾರತದ ಪ್ರಪ್ರಥಮ ಸ್ವತಂತ್ರ ವಿಚಾರವಾದಿಗಳು; ರೆ ಚೆನ್ನಪ್ಪ ಉತ್ತಂಗಿಯವರು ಉದ್ಘೋಷಿಸಿದಂತೆ, ಅವರು ಏಶಿಯಾದ ಮಹಾಬೆಳಕು. ಕಲ್ಯಾಣ ಕ್ರಾಂತಿಯ ಕಾರಣಪುರುಷರಾಗಿ ವಿಶ್ವವಿನೂತನ ಅನುಭವ ಮಂಟಪದ ಸಂಸ್ಥಾಪಕರಾಗಿ ವೀರಶೈವಧರ್ಮದ ಪರಮಾವತಾರಿಗಳಾಗಿ ಸಕಲಜೀವಿಗಳಿಗೆ ಲೇಸನೇ ಬಯಸಿದ ಬಸವಣ್ಣನವರು ಮಾನವೀಯ ಚಿರಂತನ ಮೌಲ್ಯಗಳನ್ನು ಎತ್ತಿಹಿಡಿದ ಮಹಾಮಾನವತಾವಾದಿಗಳು. ಸಮಾನತೆ, ಸಹೋದರತೆ, ಸ್ವಾತಂತ್ರ್ಯತೆ, ವಿಶ್ವಬಂಧುತ್ವ, ಮಹಿಳಾವಿಮೋಚನೆ ಮೊದಲಾದ ರಾಷ್ಟ್ರೀಯ ಮನೋಧರ್ಮ ರೂಪಿಸಿದ ರೂವಾರಿಗಳು. ವೈಜ್ಞಾನಿಕ, ವೈಚಾರಿಕ, ಶಾಸ್ತ್ರೀಯ ತಳಹದಿಯ ಮೇಲೆ ಧರ್ಮಸಿದ್ಧಾಂತಗಳನ್ನು ನಿರೂಪಿಸಿದವರು; ಧರ್ಮತತ್ವಗಳ ಮುಖಾಂತರ ಜನತೆಯ ಹೃದಯ ಪರಿವರ್ತನೆ ಮಾಡಿದ ಉನ್ನತ ನಿಲುವಿನ ಪ್ರಥಮ ದರ್ಜೆಯ ದಾರ್ಶನಿಕರು; ಆತ್ಮಕಲ್ಯಾಣದೊಂದಿಗೆ ಲೋಕಕಲ್ಯಾಣ ಸಾಧಿಸಿದ ಮಾನವ ಮಹಾದೇವರು; ಇಷ್ಟಲಿಂಗ ತತ್ವದ ಮೂಲಕ ಏಕದೇವೋಪಾಸ

ನೆಯೆ ಮಹಾನ್ ತತ್ವವನ್ನು ಪ್ರತಿಪಾದಿಸಿದರು. ಸ್ವಸ್ವರೂಪ ಜ್ಞಾನ ಮಾಡಿಕೊಟ್ಟರು. ನಿತ್ಯ ಸತ್ಯ ತತ್ವಗಳ ಮೂಲಕ ಜಗತ್ತಿನ ಜನತೆಯ ಅಜ್ಞಾನ ಅಂಧಃಕಾರ ಹೊಡೆದೋಡಿಸಿ ಸುಜ್ಞಾನದ ಪ್ರಭೆ ಬೆಳಗಿಸಿದ ಪರಂಜ್ಯೋತಿಗಳು. ಈ ಯುಗಪ್ರವರ್ತಕ ಮಹಾಶಕ್ತಿ ಸಾಧಿಸಿದ ಮಹಾಕಾರ್ಯಗಳನ್ನು ಮೆಲುಕು-ಹಾಕುತ್ತ ಹೋದರೆ ವಿಸ್ಮಯವೆನಿಸುತ್ತದೆ. ಮಹಾತ್ಮ ಬಸವಣ್ಣನವರು ಜಗತ್ತು ಮಿಥ್ಯವೆಂದು ಹೇಳಲಿಲ್ಲ, ಸತ್ಯವೆಂದು ಪ್ರತಿಪಾದಿಸಿದರು. ಈ ಲೋಕ ಮಾಯೆಯೆಂದು ಬೋಧಿಸಲಿಲ್ಲ: ಮಾನವಜೀವನದ ಬಗೆಗೆ ಜಿಗುಪ್ಸೆ ಹುಟ್ಟಿಸಲಿಲ್ಲ ಇರಬೇಕು; ಇದ್ದು ಜಯಿಸಬೇಕೆಂದರು. ಲೇಸೆನಿಸಿಕೊಂಡು ಒಂದು ದಿನ ಬದುಕಿದರೆ ಸಾಕು; ಸಾರ್ಥಕವೆಂದರು. ಈ ಮರ್ತ್ಯಲೋಕವು ಕರ್ತಾರನ ಕಮ್ಮಟವೆಂದರು. ಹೀಗೆ ಅವರ ವಿಚಾರ ಶ್ರೇಣಿಯನ್ನು ವಿಶ್ಲೇಷಿಸಿದಷ್ಟೂ ನಿತ್ಯನೂತನವಾಗಿ, ಸತ್ಯ ಸನಾತನವಾಗಿ ತೋರುತ್ತದೆ. ಹಳೆ ಬೇರು ಹೊಸ ಹೂವು ಚಿಗುರಿದಂತಾಗುತ್ತದೆ.

ಜಗತ್ತಿನ ಕಲ್ಯಾಣ ಸಾಧಿಸಿದ ಮಾನವ ಮಹಾದೇವರಾಗಿ, ಮಹಾನುಭಾವಿ ಅಣ್ಣ ಬಸವಣ್ಣನವರ ಸಮಕಾಲೀನರಾಗಿ ತೊಳಗಿ ಬೆಳಗಿದರು ಅಸಂಖ್ಯಾತ ಶ್ರೇಷ್ಠ ಶಿವಶರಣ-ಶರಣೆಯರು. ಜಗತ್ತಿನ ಇತಿಹಾಸದಲ್ಲಿಯೇ ಇಷ್ಟೊಂದು ಸಂಖ್ಯೆಯಲ್ಲಿ ಏಕಕಾಲಕ್ಕೆ ವಚನ ರಚನೆ ಮಾಡಿದ ಉದಾಹರಣೆ ಇನ್ನೊಂದಿಲ್ಲ. ಇತ್ತೀಚಿನ ಸಂಶೋಧನೆಯಿಂದ ೩೫೦ ಶಿವಶರಣ-ಶರಣೆಯರ ಹೆಸರುಗಳನ್ನು ಗುರುತಿಸಲು ಸಾಧ್ಯವಾಗಿದೆ.[೧] ಇನ್ನೂ ಹೆಚ್ಚಿನ

೧. ವಚನಸಾಹಿತ್ಯ—ಎಂ. ಚಿದಾನಂದಮೂರ್ತಿ, ಪುಟ ೯೯

ಸಂಶೋಧನೆಯಾದಂತೆ ಈಸಂಖ್ಯೆ ಇನ್ನೂ ಬೆಳೆಯಲು ಬೇಕಾದಷ್ಟು ಅವಕಾಶವಿದೆ. ಅನೇಕರು ಇನ್ನೂ ಅಜ್ಞಾನ ಸ್ಥಿತಿಯಲ್ಲಿಯೇ ಉಳಿದಿದ್ದಾರೆ; ಕಾಲಗರ್ಭವಲ್ಲಿ ಅಡಗಿಹೋಗಿದ್ದಾರೆ. ಕನ್ನಡಿಗರ ಉದ್ಧಾರಕ್ಕಾಗಿ ಹೋರಾಡಿದ ಈ ಮಹಾತ್ಮರ ಜೀವನ ಚರಿತ್ರೆಗಳು ಬೆಳಕಿಗೆ ಬಂದಷ್ಟೂ ಒಳ್ಳೆಯದು.

ಅನುಭವಮಂಟಪದ ಸಕ್ರಿಯ ಸದಸ್ಯರಾಗಿ, ಮಹಾನುಭಾವಿಗಳಾಗಿ ತತ್ತ್ವವೇತ್ತರಾಗಿ ಬೆಳಗಿದ (೧) ಜೇಡರ ದಾಸಿಮಯ್ಯ (೨) ಮಡಿವಾಳ ಮಾಚಿದೇವ (೩) ಮೋದಾರ ಕೇತಯ್ಯ (೪) ಹಡಪದ ಅಪ್ಪಣ್ಣ (೫) ಪಡಿಹಾರಿ ಉತ್ತಣ್ಣ (೬) ಡಕ್ಕೆಯ ಬೊಮ್ಮಣ್ಣ (೭) ತುರುಗಾಹಿ ರಾಮಣ್ಣ (೮) ಸುಂಕದ ಬಂಕಣ್ಣ (೯) ಒಕ್ಕಲ ಮುದ್ದಯ್ಯ (೧೦) ದಸರಯ್ಯ (೧೧) ಡೋಹರ ಕಕ್ಕಯ್ಯ (೧೨) ಹಡಪದ ರೇಚಯ್ಯ (೧೩) ನುಲಿಯ ಚಂದಯ್ಯ (೧೪)ಮಾದಾರ ಚೆನ್ನಯ್ಯ (೧೫)ಶಿವನಾಗಮಯ್ಯ (೧೬) ತಳವಾರ ಕಾಮಿದೇವ (೧೭) ಗಾಣದ ಕನ್ನಪ್ಪ (೧೮) ವೈದ್ಯ ಸಂಗಯ್ಯ (೧೯)ಕಿರಾತ ಸಂಗಯ್ಯ (೨೦) ಸೂಜಿ ಕಾಯಕದ ರಾಮಿತಂದೆ (೨೧) ಕಧಿರ ಕಾಯಕದ ರೆಮ್ಮವ್ವೆ (೨೨) ಬಾಚಿ ಕಾಯಕದ ಬಸವಪ್ಪ (೨೩) ಸತ್ತಿಗೆಯ ಕಾಯಕದ ರಾಮಿಚಂದೆ (೨೪) ಕೊಟ್ಟಣದ ರೆಮ್ಮವ್ವೆ (೨೫) ಗಟ್ಟಿವಾಳ ಮುದ್ದಣ್ಣ (೨೬) ಕಿನ್ನರಿಬ್ರಹ್ಮಯ್ಯ (೨೭) ಮೋಳಿಗೆಯ ಮಾರಯ್ಯ (೨೮) ಆಯ್ದಕ್ಕಿ ಮಾರಯ್ಯ (೨೯) ಸುಜ್ಞಾನಿದೇವ (೩೦) ನನ್ನಯ್ಯ (೩೧) ಮರುಳಶಂಕರದೇವ (೩೨) ನಗೆಮಾರಿತಂದೆ (೩೩) ಶಾಂತರಸ (೩೪) ನಿಜಲಿಂಗ ಚಿಕ್ಕಯ್ಯ (೩೫) ಏಕಾಂತದ ರಾಮಯ್ಯ (೩೬) ಕುಂಬಾರ ಗುಂಡಯ್ಯ

(೩೭) ಆಮುಗಿದೇವ (೩೮) ಹರಳಯ್ಯ (೩೯) ಬೊಕ್ಕಸದ ಚಿಕ್ಕಣ್ಣ (೪೦) ಮೈದುನ ರಾಮಯ್ಯ (೪೧) ಗಣದಾಸಿ ವೀರಣ್ಣ (೪೨)ಮನಮುನಿ ಗುಮ್ಮಟಯ್ಯ (೪೩) ಬಹುರೂಪಿ ಚೌಡಯ್ಯ (೪೪) ಮುಸುಟಿಯ ಚೌಡಯ್ಯ (೪೫) ಅಂಬಿಗರ ಚೌಡಯ್ಯ (೪೬)ಪುಷ್ಪದ ಸೋಮಯ್ಯ (೪೭) ಎಚ್ಚರಿಕೆ ಕಾಯಕದ ಮುಕ್ತಿನಾಥ (೪೮) ಪಾಕದ ಭೀಮಯ್ಯ (೪೯) ಹೊಡೆಹುಲ್ಲ ಬಂಕಯ್ಯ (೫೦)ಉರಿಲಿಂಗಪೆದ್ದಿ (೫೧) ಉರಿಲಿಂಗದೇವ (೫೨) ತೆಲುಗೇಶ ಮಸಣಯ್ಯ (೫೩) ಚಂದಿಮರಸ ಮೊದಲಾದವರು ಕ್ರಿಯಾಶೀಲರು, ಶೀಲಸಂಪನ್ನರು, ಕಾಯಕದ ಕಲಿಗಳು, ಅನುಭವ ಮಂಟಪ ವಿಶ್ವವಿಖ್ಯಾತಿ ಪಡೆಯಲು ಕಾರಣಕರ್ತರು. ತತ್ತ್ವವೇತ್ತರು. ಇವರಜೀವನ ಚರಿತ್ರೆಗಳು ಜನಸಾಮಾನ್ಯರ ಹೃದಯಮಂದಿರದಲ್ಲಿ ಶಾಶ್ವತ ಸ್ಥಾನ ಪಡೆಯಲರ್ಹವಾಗಿವೆ.

“ಕಲ್ಯಾಣವೆಂಬ ಪ್ರಣತೆಯಲ್ಲಿ, ಭಕ್ತಿರಸವೆಂಬ
ತೈಲವನೆರೆದು
ಆಚಾರವೆಂಬ ಬತ್ತಿಯಲ್ಲಿ ಬಸವಣ್ಣನೆಂಬ ಜ್ಯೋತಿ
ಮುಟ್ಟಿಸಲು
ತೊಳಗಿ ಬೆಳಗುತ್ತಿರ್ದುದಯ್ಯ ಶಿವನ ಪ್ರತಾಪ
ಆ ಬೆಳಗಿನೊಳಗೆ ಒಪ್ಪುತ್ತಿರ್ದರಯ್ಯ ಅಸಂಖ್ಯಾತರು”

ಇಂಥವರ ಸಾಲಿನಲ್ಲಿ ಅವಶ್ಯವಾಗಿ ಸೇರತಕ್ಕವ ‘ಗಜೇಶ ಮಸಣಯ್ಯ’. ‘ಲಿಂಗಮಧ್ಯೆ ಜಗತ್ ಸರ್ವಂ’ ಎಂಬ ತತ್ವದ ವಿಜಯ ಪತಾಕೆಯನ್ನು ಎತ್ತಿಹಿಡಿದ ಧೀಮಂತ, ಹೃದಯಶ್ರೀಮಂತ, ಅನುಪಮ ಅನುಭಾವಿ, ಅಪ್ರತಿಮ ವಚನಕಾರ, ಲಿಂಗಾಂಗ ಸಾಮರಸ್ಯದ, ಸವಿಸುಖದ ಸೊಬಗನ್ನು ಮನಮುಟ್ಟುವಂತೆ

ಮನೋಜ್ಞವಾಗಿ ವರ್ಣಿಸಿದ ಇವನ ವಚನಗಳು ಹೃದಯಂಗಮ ವಾಗಿವೆ, ಅರ್ಥಪೂರ್ಣವಾಗಿವೆ.

ಬಸವಾದಿ ಪ್ರಮಥರು ಇಷ್ಟಲಿಂಗ ಪೂಜೆಗೆ ವಿಶೇಷ ಮಹತ್ವವನ್ನು ಕೊಟ್ಟಿದ್ದಾರೆ. ಭಾರತೀಯ ಆಧ್ಯಾತ್ಮಿಕ ಕ್ಷೇತ್ರಕ್ಕೆ ಶರಣರು ಕೊಟ್ಟ ಅನುಪಮ ಕೊಡುಗೆಯಿದು. ಸ್ವಸ್ವರೂಪ ಜ್ಞಾನಕ್ಕೆ ಕೈಗಂಬವಿದು. ಅದು ನೆಲದ ಮರೆಯ ನಿಧಾನ, ಕಲ್ಲು ಮರೆಯ ಹೇಮ. ಮುಖವು ಸರಿಯಾಗಿ ಕಾಣಬೇಕಾದರೆ ಕನ್ನಡಿ ಯನ್ನು ಪ್ರತಿದಿನವೂ ಸ್ವಚ್ಛ ಮಾಡಬೇಕಾಗುತ್ತದೆ. ಅಂತೆಯೇ ನಮ್ಮ ಹೃದಯವೆಂಬ ಕನ್ನಡಿ ಸ್ವಚ್ಛವಾಗಲು ಲಿಂಗಪೂಜೆ ಮಾಡಲೇಬೇಕು. ದೇವರು ಗುಡಿ-ಗುಂಡಾರಗಳಲ್ಲಿಲ್ಲ; ನಮ್ಮ ಹೃದಯದಲ್ಲಿಯೇ ಇದ್ದಾನೆ. ಅವನೇ ಲಿಂಗಸ್ವರೂಪನಾಗಿ ಚುಳು ಕಾಗಿ ನಮ್ಮ ಕೈಗೆ ಬಂದಿದ್ದಾನೆ. ವೈಚಾರಿಕ ವೈಜ್ಞಾನಿಕ ವಿಕಾಸದ ತಳಹದಿಯ ಮೇಲೆ ಲಿಂಗತತ್ತ್ವ ನಿಂತಿದೆ. "ಮುಂಜಾವದ-ಲೆದ್ದು ಲಿಂಗದಂಘ್ರಿಯ ಮುಟ್ಟಿ ಸುಪ್ರಭಾತದಲ್ಲಿ ಶಿವಶರಣರ ಮುಖವ ನೋಡುವುದು. ಹುಟ್ಟಿದ ಜನ್ಮಕ್ಕಿದೇ ಸಫಲವು, ಸತ್ಯ ವಚನವಿಂತೆಂದುದಾಗಿ ಇಂತಿಲ್ಲದವರ ನೊಲ್ಲ ನಮ್ಮ ಕೂಡಲ ಸಂಗಮದೇವಾ" ಎಂದಿದೆ ಶರಣವಾಣಿ. "ಎನ್ನ ಕರದೊಳಗಿರ್ದು ಎನ್ನೊಳೇತಕೆ ನುಡಿಯೆ, ಎನ್ನ ಭವಭವದಲ್ಲಿ ಬಿಡದಾಳ್ದನೇ ?" ಎಂದು ಮುಪ್ಪಿನ ಷಡಕ್ಷರಿಗಳು ಹಲುಬಿ ಹಂಬಲಿಸಿ ಅಪ್ಪಿ-ಕೊಂಡರು, ಒಪ್ಪಿಕೊಂಡರು ಲಿಂಗತತ್ತ್ವವನ್ನು. ಆದುದರಿಂದ ಲಿಂಗಾಂಗಸಾಮರಸ್ಯಜ್ಞಾನದ ರಹಸ್ಯವನ್ನು ತಿಳಿದುಕೊಳ್ಳಲು ಗಜೇಶ ಮಸಣಯ್ಯನ ವಚನಗಳಿಗೆ ಮೊರೆ ಹೋಗಬೇಕು. ಭಾವ-ಭಾಷೆಗಳ ಸೌಂದರ್ಯ, ಗಾಂಭೀರ್ಯಗಳಲ್ಲಿ, ಅಕ್ಕ

ಮಹಾದೇವಿಯ ವಚನಗಳಿಗೆ ಸರಿದೊರೆಯಾಗಿ ನಿಲ್ಲಬಲ್ಲ ವಚನಗಳನ್ನು ನೀಡಿದ ಉನ್ನತ ನಿಲುವಿನ ಮಹಾಶರಣ, ಗಜೇಶ ಮಸಣಯ್ಯ.

## ೨. ಜೀವನ ಚರಿತ್ರೆ

ಗಜೇಶ ಮಸಣಯ್ಯ ಐತಿಹಾಸಿಕ ಪ್ರಸಿದ್ಧ ಶ್ರೇಷ್ಠ ಶರಣ. ಅವನು ಜನ್ಮವೆತ್ತಿ ಬಂದ ತಾಣ ಈಗಿನ ಸೊಲ್ಲಾಪುರ ಜಿಲ್ಲೆಯ ಅಕ್ಕಲಕೋಟೆ ತಾಲೂಕಿನ ಕರಜಗಿ. ಅವನ ತಂದೆ-ತಾಯಿಗಳ ಹೆಸರು ತಿಳಿದುಬಂದಿಲ್ಲ. ಆತನ ಇಷ್ಟದೇವತೆ ಮಹಾಲಿಂಗ ಗಜೇಶ. ಈ ಮಹಾಲಿಂಗ ಗಜೇಶನ ದೇವಾಲಯವನ್ನು ಇಂದಿಗೂ ಕರಜಗಿಯಲ್ಲಿ ನೋಡಬಹುದು. ಈ ಪ್ರದೇಶವು ಅಂದು ಅಚ್ಚ ಕನ್ನಡ ನಾಡಾಗಿತ್ತು; ಅವರ ಭಾಷೆಯು ಚೊಕ್ಕ ಕನ್ನಡವಾಗಿತ್ತು. ಹೆಚ್ಚೇನು! ಕನ್ನಡದ ಭದ್ರಕೋಟೆಯಾಗಿತ್ತು. ಅಲ್ಲಿಯ ಜನರು ಇಂದಿಗೂ ಕನ್ನಡವನ್ನು ಸೊಗಸಾಗಿ ಮಾತನಾಡುತ್ತಾರೆ. ಕನ್ನಡದಲ್ಲಿಯೇ ಬರೆದ ಹಸ್ತಪ್ರತಿಗಳು ಬೇಕಾದಷ್ಟು ದೊರೆಯುತ್ತವೆ. ಇಂದು ಅದು ಮಹಾರಾಷ್ಟ್ರಕ್ಕೆ ಸೇರಿದೆ. ಗಜೇಶ ಮಸಣಯ್ಯನ ಹೆಸರು ಕನ್ನಡ ಕಾವ್ಯಪ್ರಪಂಚದಲ್ಲಿ ಪ್ರಖ್ಯಾತವಾಗಿದೆ. ಸುಳಿವ ಶಾಸನದಂತೆ ಸುಳಿದೆಗೆದಿದೆ; ಸಹಸ್ರಗಣ ನಾಮಾವಳಿಯಲ್ಲಿ ಅರಳಿದೆ. ತೆಲುಗಿನಲ್ಲಿರುವ ಪಾಲ್ಕುರಿಕೆ ಸೋಮನಾಥನ ಪಂಡಿತಾರಾಧ್ಯ ಚರಿತ್ರೆ (ಸು. ೧೩೦೫) 'ಬಸವಪುರಾಣಮು'ಗಳಲ್ಲಿಯೂ ಇವನ ಹೆಸರು ಉಲ್ಲೇಖಿತಗೊಂಡಿರುವುದು ಗಮನಾರ್ಹವಾಗಿದೆ.

(i) ಭೀಮಕವಿಯ ಬಸವಪುರಾಣ (ಸು. ೧೪೦೦)

"ವಸುಧೆಯೊಳು ಮತ್ತಂ **ಗಜೇಶ್ವರ**
**ಮಸಣಿದೇವಂ** ತನ್ನೊಳಗೆ ಮರೆ
ದಸಮ ಶಿವಲಿಂಗಾರ್ಚನಾಮಗ್ನದೊಳಿರಲು ನಡುವೆ
ಮುಸುಕಿ ಬರಲಂಜಿದ್ದ ಸೆಗೆ ಖಂ
ಡಿಸಿದವೊಲು ನೀಂ ಪರಿದೆಯಲ್ಲಾ
ಉಸುರಲೇಸಿನ್ನಡಗಡಗು ಕೊಡು ಕೊಡು ಪಥವನೆನುತ
(ಕಾಂ. ೪, ಸಂ. ೩೨, ಪ. ೩೪)

ಬಸವರಾಜನ ಬೊಕ್ಕಸದವನೋ
ದಸರಿದೇವನ ಕೂರ್ಪಸುತನೊ
ಮುಸುಟಿ ಚೌಡಯ್ಯನ ಸುಪುತ್ರನೊ ಸುರಗಿ ಚೌಡಯ್ಯನ
ಶಿಶುವೊ ಕರಿಕಾಲನ ಕರಾಳುವೊ
**ಮಸಣಿದೇವನ** ಕಿಂಕರನೋ ಬಾ
ಣಸಿಗನೊ ಚೇರಮನ ಕಕ್ಕಯ್ಯಗಳ ಸಿಂಬಕನೊ
(ಕಾಂ. ೬, ಸಂ. ೪೨, ಪು. ೩೪)

ii) ಪದ್ಮಣಾಂಕ (೧೪೦೦) ಪದ್ಮರಾಜಪುರಾಣ

"ತೊಱೆಯ ನಡುವೀಶ ಪೂಜಾಲೀಲೆಯಿಂದಿರ್ದು
ತೊಱೆ ಬಂದೊಡಱಿಯದೇಳ್ ಪಗಲಭವ ಸುಖದ ನಿ
ಬ್ಬೆಱಗಿಂ **ಗಜೇಶ ಮಸಣಯ್ಯ**ನಿರನೇ..."(೪-೫೪)

iii) ಕಕ್ಕೇರಿಯಾರಾಧ್ಯ ನಂಜುಂಡನ ಭೈರವೇಶ್ವರ ಕಾವ್ಯ
(ಸು. ೧೫೦೦)

ಉರದ ಗಜೇಶನೊಳ್
ತರಿಸಂದು ಮಸಣಯ್ಯ
ನರಿಯದಂತಿರ್ದಪೆರ್ಪುಳಿಯೊ (೩-೧೬೯)

iv) ಗುಬ್ಬಿ ಮಲ್ಲಣಾರ್ಯನ ವೀರಶೈವಾಮೃತಮಹಾಪುರಾಣ (ಸು. ೧೫೩೦)

ನೀರ ಸೊಡರಂ ಬೆಳಗಿ ಲಿಂಗದೊಳಗಂ ಪೊಕ್ಕ
ನಾರಿ ಸೋಹಳಿಯು ಪುರ ವೀರಸೋಮವ್ವೆಯಾ
ನೀರೆರಳ್ಕಡೆಯೊಳಿರ್ದಾ ತೊರೆಯೇಳುದಿವಸಂ
**ಗಜೇಶ್ವರ ಮಸಣನೂ**
ಓರಂತೆ ಲಿಂಗಪೂಜೆಯೊಳಿರ್ದನೈ ಕೇಳು
ಮಾರಹುಲಿಗೆರೆಯರಸನುಳಯುಮೇಶ್ವರಚಿಕ್ಕ
ಣಾರಾಧ್ಯನೊಲಿಸಿದಂತನುಣಂಗಳನುಳಿದವಂ ಮರುಳ
ಸಿದ್ಧೇಶ್ವರಂ (೮-೪-೩೪)

ಕರುಳ ಕೇತಯ್ಯನಕ್ಷಿಗಳಲ್ಲಿ ಕರುಳುಗಳು
ಸುರಿವಂತೆ ನೋಡುತನಿಮಿಷ ಕೇಶಿದೇವ
ತುರು **ಗಜೇಶ್ವರ ಮಸಣ**ಭೃಂಗಿಯಲ್ಲಮರ
ತೆರೆದಿಂದೀಕ್ಷಿಸುತ ಪೂಜೆಯೂ

ವಿರಚಿಸುವ ಕಾಲದೊಳಗಾ ಸೂರಸಾನಾಂಬೆ
ಯರು ವೇಮನಾರಾಧ್ಯ ಬೆಲಿದೇವಿಯರು ಮುಖ್ಯ
ಶರಣರೆಯಿತರೆ ಕಾಣುತೆದ್ದು ಲಿಂಗದ ಕೈಯ ಬಿದಿರ್ದು
ಕೈಮುಗಿದನಾರ್ಯರ್ಗಂ (೮-೫-೧೯)

ಶರಧಿ ಮಧ್ಯದ ಬಸದಿಯೊಳಗಿಪ್ಪ ಬೌದ್ಧನಂ
ಪರಭವಿಸೆ ನೀರಮೇಲೆಯ್ದುತ್ತ ನೆನದರಾ
ಶರಣ ಮುಂಸುಟಿಯು ಚೌಡಯ್ಯಂ **ಗಜೇಶ ಮಸಣ**....
(೮–೬–೩೪)

v) ಅಸಂಖ್ಯಾತರ ರಗಳೆ ? (ಸು ೧೬೦೦)

ತೊರ ಬಂದಡರಿಯದೆ ಇರುಳು ಶಿವಗೋಷ್ಠಿಯೊಳು
ಮರದಿರ್ದ ಗಜೇಶ ಮಸಣಯ್ಯನಾಳಾನಯ್ಯ (೫೧)

vi) ಶಾಂತವಿರಚಿತ ಅಭವಸ್ತೋತ್ರದ ಕಂದ! (ಸು:೧೬೦೦)

ನಿಜಲಿಂಗ ಚಿಕ್ಕದೇವಂ
ಅಜಗಣ್ಣನುಃ ಸಿದ್ಧರಾಮಪ್ರಭುದೇವಣ್ಣಂ
**ಗಜೆಯೇಶ ಮಸಣಿದೇವಂ**
ಭುಜಗಾಭರಣನೆ ಪರಾಕು ಚಿತ್ತೈಸಭವಾ (೮೨)

vii) ಸಿದ್ಧನಂಜೇಶನ ಗುರುರಾಜಚಾರಿತ್ರ; (ಸು ೧೬೫೦)

ಕರವೀರ ಪುಷ್ಪವೈದ್ಯರೊಳು ಶಿವನಂ ಭಜಿಸು
ಶಿರಲೊಂದು ಕುಂದೆ ಕಣ್ಣಂ ಕಿತ್ತು ಪೂಜಿಸಲಿ
ಹರಮೆಚ್ಚಿ ಮೆರೆದರೆಂಟಾ ಮಲ್ಲಿನಾಥಂಗೆ ತೊರೆಯು
ನಡುಕುರುವದಲ್ಲಿ
ವರಲಿಂಗಪೂಜೆಯು ಮಾಡುತಿರೆ ಹೊಳೆ ಮೇಲು
ವರಿಯೆ ನೀರೊಳಗೇಳುದಿನವಿದ್ದು ತೊರೆದೆಗೆಯೆ
ಹರುಷದಿಂ ಬಂದಾ **ಗಜೇಶ ಮಸಣಯ್ಯ**–
ನೆಂದೊರೆದನಾ ಗುರುರಾಯನು (೮–೮೬)

## viii ಶಾಂತಲಿಂಗದೇಶಿಕನ ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರರತ್ನಾಕರ

ಕರಜಗಿಯೆಂಬ ಪುರದಲ್ಲಿ ಗಜೇಶ ಮಸಣಯ್ಯನು ಜಂಗಮ ದಾಸೋಹವ ಮಾಡುತ್ತ ಲಿಂಗಪೂಜೆಯ ಮಾಡುವಲ್ಲಿ. ಇತರೇತರವ ಮರದು, ಹುಲಿ. ಕರಡಿ. ಸರ್ಪ. ಶರಭ. ಸರಧಿ. ವೃಶ್ಚಿಕಾನೆ, ಭೂತ. ವೇತಾಳ. ಬಿರುಗಾಳಿ. ಅನಲ, ಸಿಡಿಲು. ಮಿಂಚು, ಮಳೆ. ಹೊಳೆ ಇವರ ಭಯ ಬಂದಡೆಯು ಲಿಂಗ ಪೂಜೆಯ ಬಿಟ್ಟು ತೊಲಗಬಾರದೆಂಬ ಭಾಷೆಯಿಂದ ಪೂಜೆಗೆ ಯ್ಯುತ್ತಿರಲು, ಕೆಲಂಬಂ ಕಾಲ ನಡೆಯಲು ಆಗ ಒಂದು ದಿನ ಮಸಣಯ್ಯನು ಗುರುದರುಶನಕ್ಕೆ ಪೋಗುವಾಗ ದಾರಿಯ ಲ್ಲೊಂದು ನದಿಯಂ ಕಂಡು ಶಿವಪೂಜೆಗೆ ಮೂರ್ತವ ಮಾಡಿ ಶಿವಧ್ಯಾನದಲ್ಲಿರುವಾಗ, ಆ ಸಮಯದಲ್ಲಿ ಇವರ ಲಿಂಗನಿಷ್ಠೆಯ ನೋಡಬೇಕೆಂದು ಶಿವನು ಗಗನವಿಭಾಗವಪ್ಪಂತೆ ಮಳೆಯ ಕರೆ ಯಲು, ಮೂರು ಜಾವ ಹಿಂಗದೆ ಶಿವಪೂಜೆಯಲ್ಲಿರುವಾಗ ಮಳೆಯ ಉದಕದಿಂದ ನೆನೆದು ಭಳಿಯೆಂದು ಶಿವಪೂಜೆಯ ಬಿಡದೆ ಸುರಿವ ಮಳೆಯಲ್ಲಿ ಶಿವಪೂಜೆಯಂ ಹಿಂಗದೆ ಮಾಡುತ್ತಿ ರುವಾಗ, ಮಳೆಹೊಳದು ಪೆರ್ನದಿಯುರವಣಿಸಿ ಬರುವಾಗ, ಗಜೇಶ ಮಸಣಯ್ಯನು. ಲಿಂಗನಿಷ್ಠೆಯಲ್ಲಿ ನಿಬ್ಬೆರಗಾಗಿಪ್ಪುದಂ ಕಂಡು. ನದಿಯ ಮೇಲೆ ಮುಸುಂಕಿ ಬರಲಮ್ಮದೆ, ತಾಳ ಮರ ದುದ್ದದಲ್ಲಿ ಇಬ್ಬೋಳಾಗಿ, ಅಪರಿಂದ ಸ್ಥಾನವಂ ಬಿಟ್ಟು ಹಿಂದೆ ಅಗಲಿ ಮುಂದೆ ಕೂಡಿ ಪರಿವುದಂ ಕಂಡು, ಧರೆಯ ಜನರೆಲ್ಲರು ಹರಪೂಜೆಯ ಮಾಡುವ ಭಕ್ತರಿಗೆ ಸರಧಿ ಅಂಜುವದೆಂದು ಭಕ್ತಾಳಿ ಕೊಂಡಾಡುತ್ತಿರಲು, ಲಿಂಗಪೂಜೆಯ ಮಾಡುವಲ್ಲಿ

ಮಳೆ ಹೊಯ್ದು ಮಳೆ ಬಂದುದು ಕನಸಿನಂತಾಗಲು ಆಗ ಗಜೇಶ ಮಸಣಯ್ಯನು ಮಹಾಲಿಂಗ ಗಜೇಶ್ವರನೆಂಬ ತಮ್ಮ ಪ್ರಾಣ ಲಿಂಗದಲ್ಲಿ ನುತಿಸಿದನು. ಇತ್ತೆಂದು: "ಅಗಲಿದ ನಲ್ಲನ ಕನಸಿನಲ್ಲಿ ಕಂಡು ಸುಳಿಯದಿರವ್ವಾ; ಕಂಡ ಕನಸು ದಿಟವಾದರೆ ಆವ ನಮ್ಮ ನಲ್ಲ; ಮನಸುಳ್ಳವರು ನೀವು ಪುಣ್ಯಗೆಯ್ದಿರವ್ವಾ; ಮಹಾಲಿಂಗ ಗಜೇಶ್ವರನು ಅಗಲಿದರೆ ನಿದ್ರೆ ನಮಗಿಲ್ಲ; ಕನ್ನಸಿನ್ನಲ್ಲಿಂದ ಬಹು ದವ್ವಾ" ಬಂದು ಲಿಂಗವ ನುತಿಸುವ ವಿಕಳಾವಸ್ಥೆಯಲ್ಲಿ ನಿರ್ವಯಲಾದರು, ಪು.೧೧೪–೧೧೫)

ix) ಉತ್ತರ ದೇಶದ ಬಸವಲಿಂಗನ ಬಸವೇಶ್ವರ ಪುರಾಣದ ಕಥಾಸಾರ

ಗಜೇಶ ಮಸಣಯ್ಯಗಳು ಗುರುದರುಶನಕ್ಕೆ ಹೋಗುವಾಗ ದಾರಿಯಲ್ಲಿ ಹೊಳೆಯೊಳಗೆ ಶಿವಪೂಜೆಯ ಮಾಡುವಾಗ ಧ್ಯಾನದಲ್ಲಿ ಪರವಶವಾಗಿರಲು, ಆಗ ಹೊಳೆ ಬಂದು ಅವರಿಗೆ ಎರಡು ಭಾಗವಾಗಿ ಹರಿಯಿತ್ತು. (ಪು.೧೫೧).

x) ರಸಋಷಿ ಮುಂಪ್ಪಿನ ಷಡಕ್ಷರಿಗಳು ತಮ್ಮ ಒಂದು ಪದ್ಯದಲ್ಲಿ ಮುಕ್ತಕಂಠದಿಂದ ಹೀಗೆ ಹಾಡಿಕೊಂಡಿದ್ದಾರೆ :

"ಬಸವೇಶ್ವರನು ಚನ್ನ
ಬಸವೇಶ್ವರನು ಕರುಣೆ
ದಸರಯ್ಯ ಮೋಳಿಗೆಯ ಮಾರಯ್ಯನ
ಮಸಣಯ್ಯಗಳ ಮನೆಯ
ಕಸವ ಗುಡಿಸುವ ಮಹಾ
ಹೊಸಸೇವಕರು ನಮಗೆ ಸರಿಯದಾರು".

ತೆಲುಗು ಕನ್ನಡ ಮೊದಲಾದ ಕನ್ನಡದ ಪ್ರಮುಖ ಕಾವ್ಯಗಳು 'ಗಜೇಶ ಮಸಣಯ್ಯ' ಶ್ರೇಷ್ಠ ಶಿವಶರಣನೆಂದು ಸಾರಿ ಸಾರಿ ಹೇಳುತ್ತವೆ. ನಮ್ಮೆಲ್ಲರ ಪುಣ್ಯವಿಶೇಷದಿಂದ ಕಾಲಕಾಲಕ್ಕೆ ಬೆಳಗಿಹೋದ ಕವಿಗಳು ಇಷ್ಟಾದರೂ ಶರಣಸಂಸ್ಕೃತಿಯ ಉಜ್ವಲ ಪರಂಪರೆಯನ್ನು ಕಾಯ್ದುಕೊಂಡು ಬಂದಿದ್ದಾರೆ. ಗಜೇಶ ಮಸಣಯ್ಯನ ಹೆಸರನ್ನು ಸುವರ್ಣಾಕ್ಷರಗಳಿಂದ ಉಲ್ಲೇಖಿಸಿದ್ದಾರೆ. ಇತ್ತೀಚಿನ ಸಂಶೋಧನೆಯಿಂದ ಪ್ರಸಿದ್ಧಿಗೆ ಬಂದ ಶಿಲಾಹಾರದ ಒಂದು ಶಾಸನದಿಂದ[೧] ಮಸಣಯ್ಯನ ಇಷ್ಟದೇವತೆಯಾದ 'ಗಜೇಶ್ವರ'ನ ದೇವಾಲಯವು ಕರಜಿಗಿಯಲ್ಲಿಯೇ ಇದೆ. ಪ್ರತಿವರುಷ 'ಮಹಾನವಮಿ' ಸಂದರ್ಭದಲ್ಲಿ ಜಾತ್ರೆಯು ನೆರವೇರುತ್ತದೆ. ಪೂಜೆ, ಪುರಸ್ಕಾರ ಪ್ರಸಾದ ವಿತರಣೆ ಇಂದಿಗೂ ತಪ್ಪದೆ ನಡೆಯುತ್ತಿದೆ.

ಹಾಗೆಯೇ ಈ ಗ್ರಾಮದ ಪೂರ್ವಕ್ಕೆ ೪೦ ಮೈಲುಗಳ ಅಂತರದಲ್ಲಿ ಕಲಬುರ್ಗಿ ಆಳಂದ ಮಾರ್ಗದಲ್ಲಿ 'ಮುನವಳ್ಳಿ' (ಮುನ್ನೊಳ್ಳಿ) ಎಂಬ ಗ್ರಾಮವಿದೆ. ಅದು ಅನೇಕ ಕಡೆ 'ಮಳವಳ್ಳಿ'ಯೆಂದು ತಪ್ಪಾಗಿ ಪ್ರಕಟವಾಗಿದೆ. ಅಲ್ಲಿ ಮಸಣಯ್ಯನ ಹೆಸರಿನ ದೇವಾಲಯವಿದೆ. ಅಲ್ಲಿ ಇಂದಿಗೂ ಪ್ರತಿವರುಷ ಐದು ದಿವಸಗಳ ಪರ್ಯಂತ ಚೈತ್ರ ಶುದ್ಧ ತೃತೀಯಾದಲ್ಲಿ ಮಸಣಯ್ಯನ ಸವಿಸ್ಮರಣೆಯಲ್ಲಿ ಯಾತ್ರಾಮಹೋತ್ಸವವು ಅತ್ಯಂತ ವಿಜೃಂಭಣೆಯಿಂದ ಜರುಗುತ್ತಿದೆ. ಗಜೇಶ ಮಸಣಯ್ಯ ತನ್ನ ಜೀವನದ ಕೊನೆಯ ಭಾಗದಲ್ಲಿ ಇಲ್ಲಿ ಉಳಿದುಕೊಂಡಿರಬಹುದು.

---

೧. ಶಿಲಾಹಾರದ ಪ್ರಾಚೀನಶಾಖೆ—ಪಿ. ಬಿ. ದೇಸಾಯಿ ಪ್ರ. ಕ. (೨೭-೨) ಪುಟ : ೬೫

ಇಲ್ಲಿಯೇ ಲಿಂಗದೊಳಗಾಗಿರಬಹುದೆಂದು ತೋರುತ್ತದೆ. ಸಮೀಪದಲ್ಲಿಯೇ 'ಬೆಣ್ಣೆತೊರೆ' ಎಂಬ ಹೆಸರಿನ ಹಳ್ಳವು ಜುಳು ಜುಳು ನಿನಾದ ಮಾಡುತ್ತ ಹರಿಯುತ್ತದೆ. ಸುತ್ತಲೂ ರಮ್ಯ ಮನೋಹರವಾದ ಪ್ರಶಾಂತ ಪರಿಸರವಿದೆ. ಸಹಜ ಸುಂದರ ನಿಸರ್ಗದ ಸೊಬಗು ಕಣ್ಣಿಗೊಂದು ಹಬ್ಬ; ಷಡಗರ. ಇದೇ ಮುಸಣಯ್ಯ ಲಿಂಗಪೂಜೆಗೆ ಕುಳಿತ ತಾಣ. ಇದು ಕೂಡ ಹೊಳೆಯುಂದು ಕಾವ್ಯಗಳಲ್ಲಿ ಪ್ರಸ್ತಾಪವಮಾಡಲಾಗಿದೆ. ಗುರುದರ್ಶನಕ್ಕಾಗಿ ಗಜೇಶ ಮಸಣಯ್ಯ ಕರಜಗಿಯಿಂದ ಮುನವಳ್ಳಿಗೆ ಆಗಾಗ ಬಂದು ಹೋಗುತ್ತಿದ್ದ. ಅದೊಂದು ಅವನ ಪದ್ಧತಿಯೇ ಆಗಿತ್ತು. ಅದು ಸಹಜವು ಅಹುದು. ಲಿಂಗಪೂಜಾಲೋಲನಾದ ಮಸಣಯ್ಯನಿಗೆ ಏಕಾಂತವಾದ ಪ್ರಶಾಂತವಾದ ಸ್ಥಳವೆಂದರೆ ಪಂಚಪ್ರಾಣ; ಬದಿಯಲ್ಲಿ ಹಳ್ಳ, ಹಳ್ಳದ ದಂಡೆಯ ಎಡಬಲದಲ್ಲಿ ಗಿಡ-ಮರ-ಬಳ್ಳಿಗಳು ಸೊಂಪಾಗಿ ಬೆಳೆದಿವೆ. ಸುತ್ತಲೂ ಹರಡಿದ ಹೂಬಳ್ಳಿಗಳ ಮಧ್ಯೆ ಪತ್ರಿಪುಷ್ಪಗಳಿವೆ ಇಂತಹ ಚೆಲುವಿನ ಒಲಪಿನ ತಾಣ ಸಿಕ್ಕರೆ ಕೇಳಬೇಕೆ ? ಮಸಣಯ್ಯನ ಮನಸ್ಸು ಸಂತೋಷಸಾಗರದಲ್ಲಿ ತೇಲಿಹೋಗುತ್ತಿತ್ತು. ಅಲ್ಲಿ ಬುದ್ಧನಂತೆ ಧ್ಯಾನಸ್ಥನಾಗುತ್ತಿದ್ದ. ಇಷ್ಟಲಿಂಗ ಪೂಜೆಯನ್ನು ಮನವಾರೆ ಮಾಡುತ್ತಿದ್ದ. ಆದರಲ್ಲಿಯೇ ತನ್ಮಯನಾಗಿ ಬಿಡುತ್ತಿದ್ದ. ಹಾವೇರಿ ಹುಕ್ಕೇರಿಮಠದ ಲಿಂ. ಶಿವಬಸವ ಮಹಾಶಿವಯೋಗಿಗಳು ಇತ್ತೀಚಿನವರು. ಅವರು ಸಹ ತಮ್ಮ ಪ್ರವಾಸದಲ್ಲಿ ಈ ಬಗೆಯ ಸ್ಥಳವನ್ನು ಕಂಡಕೂಡಲೆ, ಲಿಂಗಪೂಜೆಗೆ ಅಣಿಯಾಗುತ್ತಿದ್ದರು. ಅಲ್ಲಿ ಅವರು ಲಿಂಗಪೂಜೆ ಮಾಡಿಕೊಂಡೇ ಮುಂದಿನ ಪಯಣ ಬೆಳೆಸುತ್ತಿದ್ದರು. ಅಥಣಿ ಮುರುಘೇಂದ್ರ ಮಹಾಶಿವಯೋಗಿಗಳೂ ಸಹ ಯೋಗಮಂಟಪದಲ್ಲಿ ಲಿಂಗ

ಪೂಜೆಯಲ್ಲಿ ನಿರತರಾಗಿರುತ್ತಿದ್ದರು. ಹೀಗೆಯೇ ಒಂದು ಸಲ ಮಸಣಯ್ಯ ಕರಜಿಗಿಯಿಂದ ಗುರುದರ್ಶನಕ್ಕಾಗಿ ಹಾತೊರೆದು ಹೊರಟ. ಮಳೆಗಾಲದ ದಿನಗಳವು. ಬದಿಯ ಹಳ್ಳದ ಸೊಂಪಾದ ಇಂಪಾದ ನೆರಳು ಕಂಡು ಅವನ ಹೃದಯ ಅರಳಿತು. ಮನಸ್ಸು ಹಿಗ್ಗಿತು. ಅದೇ ಬೆಣ್ಣೆತೊರೆಯಲ್ಲಿ ಮಿಂದ. ಹೂ-ಪತ್ರಿಗಳನ್ನು ಆಯ್ದು ತಂದ. ಇಷ್ಟಲಿಂಗ ಪೂಜಾಲೋಲನಾದ. ಅದರಲ್ಲಿಯೇ ಮೈಮರೆತ; ಏಕಾಗ್ರತೆತನ್ಮಯತೆಯಿಂದ ಲಿಂಗದೇವನಲ್ಲಿ ಮನಮಗ್ನವಾದ.

"ಆಹಾ ಎನ್ನ ಸತ್ಯವೆ! ಆಹಾ ಎನ್ನ ನಿತ್ಯವೆ!
ಆಹಾ ಎನ್ನ ಪುಣ್ಯವೆ! ಆಹಾ ಎನ್ನ ಭಾಗ್ಯವೆ!
ಶಿವ ಶಿವ ಮಹಾದೇವ"
"ಎನ್ನ ಕುಲಗುರುವೆ ನೀ
ಎನ್ನ ವಿದ್ಯಾಗುರುವೆ
ಎನ್ನ ಭವಭವದಲ್ಲಿ ಬಿಡದ ಗುರುವೆ
ಎನ್ನದೀಕ್ಷಾ ಗುರುವೆ
ಎನ್ನ ಮೋಕ್ಷಾ ಗುರುವೆ
ಎನ್ನ ಕರದೊಳಗಿರ್ದು ಏಕೆ ನುಡಿಯೆ!"

ಎನ್ನುತ್ತ ಭಾವಪರವಶನಾದ ಆತನಿಗೆ :

'ಓಂ ನಮಃಶಿವಾಯ' ಎಂಬುದೇ ಮಂತ್ರವಾಯಿತು
ಓಂ ನಮಃಶಿವಾಯ ಎಂಬುದೇ ತಂತ್ರವಾಯಿತು
ಓಂ ನಮಃಶಿವಾಯ ಎಂಬುದೇ ಯಂತ್ರವಾಯಿತು
ಓಂ ನಮಃಶಿವಾಯ ಎಂಬುದೇ ವಶ್ಯ
ಓಂ ನಮಃಶಿವಾಯ ಎಂಬುದೇ ಸಕಲಸಿದ್ಧಿಯಾಯಿತು.

ಶಿವನೋ ಯಾವಾಗಲೂ ಪ್ರತ್ಯಕ್ಷ ನೋಡಿದರೂ ಪ್ರಮಾಣಿಸಿ ನೋಡಬೇಕೆನ್ನುವವ. ಅವನ ಲಿಂಗನಿಷ್ಠೆಯನ್ನು ಪರೀಕ್ಷೆ ಮಾಡುವ ಬಯಕೆಯಾಯಿತು! ಆಗಲೇ ನಿರಭ್ರವಾದ ಆಕಾಶ ಮೋಡದಿಂದ ತುಂಬಿ ನಿಂತಿತು. ಗುಡುಗು ಸಿಡಿಲು ಮಿಂಚು ಪ್ರಾರಂಭವಾಯಿತು. ಬಿರುಗಾಳಿ ಭರದಿಂದ ಬೀಸತೊಡಗಿತು. ಮಳೆಯು ಧಾರಾಕಾರವಾಗಿ ಸುರಿಯತೊಡಗಿತು. ಗಿಡಮರಗಳು ಮಳೆ-ಗಾಳಿಯ ಭೀಕರ ಹೊಡೆತಕ್ಕೆ ತತ್ತರಿಸಿಹೋದವು. ಸುರಿಮಳೆ ಜಡಿಮಳೆಯ ಅಬ್ಬರಕ್ಕೆ ಜನರ ಎದೆ ನಲುಗಿತು; ನಡುಗಿತು. ಹಳ್ಳವು ತುಂಬಿ ಹರಿಯತೊಡಗಿತು; ಹೊರಚೆಲ್ಲತೊಡಗಿತು. ಆದರೆ ಇಷ್ಟಲಿಂಗ ಪೂಜೆಯಲ್ಲಿ ಮೈಮರೆತ ಮುಸಣಯ್ಯನಿಗೆ ಹೊರಜಗತ್ತಿನ ಪ್ರಜ್ಞೆಯೇ ತಪ್ಪಿತ್ತು. ಅವನ ಮನ ಉನ್ಮನವಾಗಿತ್ತು. ಮಳೆ–ಗಾಳಿಗಳ ಪರಿವೆ ಅವನಿಗಿರಲಿಲ್ಲ. ಮೂರು ಜಾವ ಮಳೆ ಒಂದೇಸವನೆ ಸುರಿದರೂ ಅವನ ಮನ ಕದಲಲಿಲ್ಲ, ಬೆದರಲಿಲ್ಲ, ಬೆಚ್ಚಲಿಲ್ಲ. ಏಕಾಗ್ರತೆಗೆ ಭಂಗ ಬರಲಿಲ್ಲ; ಮೈಯಲ್ಲಾ ತೊಯ್ದಿತ್ತು. ವಿಪರೀತ ಛಳಿಯು ಕರಗಸದಂತೆ ಕೊರೆಯುತ್ತಿತ್ತು. ಈತನ ಅಪ್ರತಿಮ ಲಿಂಗನಿಷ್ಠೆಗೆ ಹಳ್ಳವೇ ಬದಿಗೆ ಸರಿದು ಹರಿದಿತ್ತು. ಅನಂತರ ಮುಂದೆ ಒಂದಾಗಿ ಹರಿದಿತ್ತು. ಮಳೆ ನಿಂತಿತು: ಹಳ್ಳ ಇಳಿಯಿತು; ಮುಸಣಯ್ಯನ ಕೀರ್ತಿಲತೆ ಹಬ್ಬಿ ಹರಡಿತು. ದಾಂಗುಡಿ ಇಟ್ಟಿತು. ಅಲ್ಲಿಯ ಜನರಿಗೆ ಆಶ್ಚರ್ಯದ ಮೇಲೆ ಆಶ್ಚರ್ಯ! ಲಿಂಗಪೂಜೆ ಮಾಡುವ ನಿಷ್ಠಾವಂತ ಭಕ್ತರಿಗೆ ಶರಧಿ ಅಂಜುವದು ಎಂಬ ನಿತ್ಯ ಸತ್ಯ ಮಾತನ್ನು ಅಂದು ಪ್ರತ್ಯಕ್ಷ ಮನಗಂಡರು. ಮುಸಣಯ್ಯನನ್ನು ಮುಕ್ತಮನಸ್ಸಿನಿಂದ ಹಾಡಿ ಹರಸಿದರು. ಧ್ಯಾನಸಮಾಧಿಯಿಂದ ಮುಸಣಯ್ಯ ಎಚ್ಚತ್ತ.

ಅದುವರೆಗೆ ನಡೆದ ಘಟನೆಗಳೆಲ್ಲವೂ ಕನಸಿನಲ್ಲಿ ಕಂಡಂತೆ ಭಾಸವಾಯಿತು. ಆನಂದತುಂದಿಲನಾಗಿ ಇಷ್ಟದೈವವನ್ನು ಮನವಾರೆ ಸ್ತುತಿಸಿದ. ಮಸಣಯ್ಯನಂತಹ ಅಪ್ರತಿಮ ಲಿಂಗನಿಷ್ಠರು ನಿಜವಾಗಿಯೂ ಅಪರೂಪ. 'ಲಕ್ಷಕ್ಕೊಬ್ಬ ಭಕ್ತ. ಕೋಟಿಗೊಬ್ಬ ಶರಣ' ಎನ್ನುವ ಮಾತಿಗೆ ಈತನು ನಿತಾಂತ ನಿದರ್ಶನ; ಉಜ್ವಲ ಉದಾಹರಣೆ.

## ಗಜೇಶ ಮಸಣಯ್ಯನ ಕಾಲ :

ಗಜೇಶ ಮಸಣಯ್ಯನ ಕಾಲ ೧೧೬೦ ಎಂದು ಕರ್ನಾಟಕ ಕವಿ ಚರಿತ್ರೆಕಾರರು ಗುರುತಿಸಿದ್ದಾರೆ.[೧] ಅವರ ನಿಲುವು ಸರಿಯಾದುದು. ಮಸಣಯ್ಯನ ಒಂದು ವಚನ ಹೀಗಿದೆ :

"ಎನ್ನ ಕರಸ್ಥಳವೇ ಬಸವಣ್ಣನಯ್ಯಾ
ಎನ್ನ ಮನಸ್ಥಳವೇ ಚೆನ್ನಬಸವಣ್ಣನಯ್ಯಾ
ಎನ್ನ ಭಾವಸ್ಥಳವೇ ಪ್ರಭುದೇವರಯ್ಯಾ
ಇಂತೆನ್ನ ಕರಮನಭಾವಂಗಳಲ್ಲಿ
ಇಷ್ಟ ಪ್ರಾಣ ಭಾವಂಗಳು ತಲ್ಲೀಯವಾಗಿ
ಮಹಾಲಿಂಗ ಗಜೇಶ್ವರಾ ನಮ್ಮ ಶರಣರ ಘನವನು
ಎನ್ನ ಸರ್ವಾಂಗದಲ್ಲಿ ಕಂಡು ಪರಮಸುಖಿಯಾಗಿರ್ದೆನು
(೬೩)

ಇನ್ನೊಂದು ವಚನವೂ ಗಮನಾರ್ಹವಾಗಿದೆ. ಅದು ಹೀಗಿದೆ :

ಈ ಸಕಳದೊಳಗೆ ಒಂದು ಸಯಿವಿಲ್ಲದೆ
ನಾವು ಹಿರಿಯರು, ನಾವು ಲಿಂಗವಂತರೆಂಬರು

---

೧. ಕ. ಕ. ಚ. ಸಂಪುಟ ೧—ಪುಟ ೨೦೯, ದ್ವಿತೀಯ ಸಂಪುಟ ೧೯೬೨

ಇದಿರ ಕೈಯಲ್ಲಿ ಎನಿಸಿಕೊಳ್ಳುತ್ತಿಹರು ಮನನಾಚದೆ,
ಇಂಥ ಮೂಗನಾಚಿಗಳ ಮೆಚ್ಚುವನೆ, ಮಹಾಲಿಂಗ ಗಜೇ
ಶ್ವರನಲ್ಲಿ
ಎನ್ನ ಹೆತ್ತ ತಂದೆ ಪೂರ್ವಾಚಾರ್ಯ ಸಂಗನಬಸವಣ್ಣ॥

"ಎನ್ನ ಹೆತ್ತ ತಂದೆ ಪೂರ್ವಾಚಾರ್ಯ ಸಂಗನಬಸವಣ್ಣ" ಪದಪ್ರಯೋಗ ಆತನು ಬಸವಣ್ಣನ ಸಮಕಾಲೀನನೆಂಬುದಕ್ಕೆ ಹೆಚ್ಚಿನ ಸಾಕ್ಷಿ ಬೇಕಿಲ್ಲ. ಹಾಗೆಯೇ ಇವನ ಪುಣ್ಯಾಂಗನೆಯೂ ಸಹ ಶ್ರೇಷ್ಠ ವಚನಕಾರ್ತಿ. ಅವಳ ಒಂದು ವಚನದಲ್ಲಿ ಬಸವಾದಿ ಪ್ರಮಥಪುಂಗವರನ್ನು ಸ್ತುತಿಸಿರುವುದನ್ನು ನೋಡಿದರೆ ಮೇಲಿನ ಮಾತಿಗೆ ಇನ್ನಷ್ಟು ಪುಷ್ಟಿ ದೊರೆಯುತ್ತದೆ. ಆ ವಚನವಿದು :

"ಗುರುವಿಂಗೆ ಗುರುವಾಗಿ ಎನಗೆ ಗುರುವಾದನಯ್ಯಾ
ಬಸವಣ್ಣನು
ಲಿಂಗಕ್ಕೆ ಲಿಂಗವಾಗಿ ಎನಗೆ ಲಿಂಗವಾದನಯ್ಯಾ ಚೆನ್ನ-
ಬಸವಣ್ಣನು
ಜಂಗಮಕ್ಕೆ ಜಂಗಮವಾಗಿ ಎನಗೆ ಜಂಗಮವಾದನಯ್ಯಾ
ಪ್ರಭುದೇವರು
ಪ್ರಸಾದಕ್ಕೆ ಪ್ರಸಾದವಾಗಿ ಎನಗೆ ಪ್ರಸಾದವಾದನಯ್ಯಾ
ಮರುಳ ಶಂಕರದೇವರು
ಬಸವಣ್ಣನಿಂದ ಶುದ್ಧ ಪ್ರಸಾದಿಯಾದೆನು
ಚೆನ್ನಬಸವಣ್ಣನಿಂದ ಸಿದ್ಧ ಪ್ರಸಾದಿಯಾದೆನು
ಪ್ರಭುದೇವರಿಂದ ಪ್ರಸಿದ್ಧಿ ಪ್ರಸಾದಿಯಾದೆನು
ಮರುಳ ಶಂಕರದೇವರಿಂದ ಮಹಾಪ್ರಸಾದಿಯಾದೆನು
ಇಂತೀ ಚತುರ್ವಿಧವೆನ್ನ ಸರ್ವಾಂಗದಲ್ಲಿ ಕರಿಗೊಂಡು

ಎಡೆದೆರಹಿಲ್ಲದ ಪರಿಪೂರ್ಣವಾಯಿತ್ತು
ಮಸಣಯ್ಯಪ್ರಿಯ ಗಜೇಶ್ವರಾ,
ನಿಮ್ಮ ಶರಣರ ಪಾದಕ್ಕೆ ನಮೋ ನಮೋ ಎನುತಿರ್ದೆನು"[೧]

ಇಲ್ಲಿ ಇನ್ನೊಂದು ಮಾತನ್ನು ಗಮನಿಸಬೇಕು. ಈತನ ಹೆಸರು. ಗಣಸಹಸ್ರದಲ್ಲಿ ಸೇರಿದೆ. ಬಸವ ಸಮಕಾಲೀನರ ವಚನಗಳನ್ನೊಳಗೊಂಡ ಎಲ್ಲ ಸ್ಥಲಕಟ್ಟಿನ ಕೃತಿಗಳಲ್ಲಿ ಇವನ ವಚನಗಳು ಸಮಾವೇಶಗೊಂಡಿವೆ. ಆದುದರಿಂದ "ಗಜೇಶ ಮಸಣಯ್ಯ" ಬಸವ ಸಮಕಾಲೀನ ವಚನಕಾರನೆಂಬುದರಲ್ಲಿ ಯಾವ ಸಂದೇಹ, ಸಂದೋಹವಿಲ್ಲ.

ಇವನ ವಚನಗಳ ಅಂಕಿತ "ಮಹಾಲಿಂಗ ಗಜೇಶ್ವರ" ಮತ್ತು 'ಮಸಣಯ್ಯ ಪ್ರಿಯ ಗಜೇಶ್ವರಾ' ಎಂಬುದು ಅವನ ಪ್ರಣಾಂಗನೆಯ ಅಂಕಿತ. ಆಕೆಯ ಒಂಬತ್ತು ವಚನಗಳು ದೊರಕಿವೆ. ಗುರು-ಶಿಷ್ಯರು ಹೇಗಿರಬೇಕೆಂಬುದನ್ನು ಬಹು ಸೊಗಸಾಗಿ ವರ್ಣಿಸುತ್ತವೆ ಈ ವಚನಗಳು.

---

೧. ಇಪ್ಪತ್ತೇಳು ಶಿವಶರಣೆಯರ ವಚನಗಳು-ಪುಟ ೯೪, ವಚನ, ೨೮

## ೩. ವಚನ ವಿವೇಚನೆ

ಇತ್ತೀಚಿನ ಸಂಶೋಧನೆಯ ಫಲವಾಗಿ ಗಜೇಶ ಮಸಣಯ್ಯನ ೬೩ ವಚನಗಳು ದೊರಕಿವೆ. ಇನ್ನೂ ಹೆಚ್ಚಿನ ವಚನಗಳು ದೊರೆಯುವ ಸಂಭವವಿಲ್ಲದಿಲ್ಲ. 'ಶರಣಸತಿ ಲಿಂಗಪತಿ' ತತ್ತ್ವದ ಸಮರ್ಪಕ ಸಮರ್ಥ ವಿಶ್ಲೇಷಣೆಯನ್ನು ಇವನ ವಚನಗಳಲ್ಲಿ ನೋಡಬಹುದು. ಅನುಪಮ ಅನುಭಾವಿಯಾದ ಗಜೇಶ ಮಸಣಯ್ಯ ಲಿಂಗತತ್ತ್ವದ ಸವಿ ಸೊಬಗನ್ನು ಸಡಗರವನ್ನು ಅತ್ಯಂತ ಮನೋಜ್ಞವಾಗಿ ವಿವೇಚಿಸಿದ್ದಾನೆ; ವಿಶ್ಲೇಷಿಸಿದ್ದಾನೆ. ಈ ವಚನಗಳು ಲಿಂಗತತ್ತ್ವದ ಮಹತ್ವವನ್ನು ಅತ್ಯಂತ ಮನೋಹರವಾಗಿ ಬೋಧಿಸುವಲ್ಲಿ ಸಂಪೂರ್ಣ ಯಶಸ್ವಿಯಾಗಿವೆ. ಅಕ್ಕಮಹಾದೇವಿ, ಸತ್ಯಕ್ಕ, ಅಕ್ಕನಾಗಮ್ಮ, ಬಸವಣ್ಣ, ಉರಿಲಿಂಗದೇವ, ಘನಲಿಂಗದೇವ, ಷಣ್ಮುಖ ಶಿವಯೋಗಿ, ಮುಪ್ಪಿನ ಷಡಕ್ಷರಿ ಮೊದಲಾದ ಮಹಾನುಭಾವರು ಲಿಂಗತತ್ತ್ವದ ವಿಚಾರಗಳನ್ನು ಸೂತ್ರಪ್ರಾಯವಾಗಿ ಅರ್ಥಗರ್ಭಿತವಾಗಿ ಅನುಭವಪೂರ್ಣವಾಗಿ ತಮ್ಮ ವಚನಗಳ ಮುಖಾಂತರ ತತ್ತ್ವಪದಗಳ ಮುಖಾಂತರ ಎತ್ತಿಹಿಡಿದಿದ್ದಾರೆ. ಇದೇ ಮಾರ್ಗದಲ್ಲಿ ಇನ್ನೊಂದು ಮೈಲುಗಲ್ಲಾಗಿ ನಿಂತವ ಗಜೇಶ ಮಸಣಯ್ಯ. ಲಿಂಗತತ್ತ್ವ ಅವನ ಮೈಮನಗಳಲ್ಲಿ ತುಂಬಿಕೊಂಡಿದೆ.

ಮಸಣಯ್ಯನ ವಚನಗಳ ಬಗೆಗೆ ಹೆಚ್ಚಿನ ವಿಮರ್ಶೆಯಾಗಲಿ, ವಿಶ್ಲೇಷಣೆಯಾಗಲಿ ಇದುವರೆಗೆ ನಡೆದಂತೆ ಕಾಣುವದಿಲ್ಲ. ಈ ದೆಸೆಯಲ್ಲಿ ಅವನ ಕೆಲವು ವಚನಗಳನ್ನು ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

"ಪರಮ ಪದವಿಯು ನಿಮ್ಮ ಕೊರಳಲ್ಲಿ ಕಟ್ಟಿಕೊಳ್ಳಿ
ಪರಮ ಪದವಿಯು ನಿಮ್ಮ ತಲೆಯಲ್ಲಿ ಹೊತ್ತುಕೊಳ್ಳಿ
ಎನಗೆ ನಿಮ್ಮ ತೊತ್ತುತನವೇ ಸಾಕು
ಮಹಾಲಿಂಗ ಗಜೇಶ್ವರದೇವಯ್ಯ
ನಿಮ್ಮ ಎದೆಯಲ್ಲಿರಿಸಿಕೊಳ್ಳಿ" (ವ. ೫೯, ಪುಟ ೩೧)

'ಸದುವಿನಯವೇ ಸದಾಶಿವನ ಒಲುಮೆಯಯ್ಯಾ; ನುಡಿದಂತೆ ನಡೆದರೆ ಇದೇ ಜನ್ಮ ಕಡೆಯಯ್ಯಾ, ಮೃದುವಚನವೇ ಸಕಲ ಜಪತಪಗಳಯ್ಯಾ' ಎಂಬ ಬಸವಣ್ಣನವರ ಲೋಕೋತ್ತರ ಕಿಂಕರಭಾವವನ್ನು ವ್ಯಕ್ತಮಾಡುವ ಹಾಗೂ ಎನಗಿಂತ ಕಿರಿಯರಿಲ್ಲ; ಶಿವಭಕ್ತರಿಗಿಂತ ಹಿರಿಯರಿಲ್ಲ ಎಂಬ ಮನನೀಯವಾದ ಮುತ್ತಿನಂತಹ ಮಾತನ್ನು ಇಂದಿಗೂ ನೆನಪಿಗೆ ತರುವಂತಿದೆ ಮೇಲಿನ ವಚನ.

ಗಜೇಶ ಮಸಣಯ್ಯ ಮಹಾಶರಣ; ಸದುಹೃದಯಿ. ಲಿಂಗವನ್ನು ಸದಾ ಎದೆಯಲ್ಲಿರಿಸಿಕೊಂಡ ಮಹಾನುಭಾವ. ದೇವರ ಪ್ರೀತಿಗೆ ಪಾತ್ರನಾಗಬೇಕಾದರೆ ಪ್ರತಿಯೊಬ್ಬ ಜೀವಿಯಲ್ಲಿ ವಿನಯ ಸಾಕಾರಗೊಳ್ಳಬೇಕು...

"ಒಳಗೆ ಶೋಧಿಸಿ ಹೊರಗೆ ಧವಳಿಸಿ
ಭಾವದಿಂದ ಗುಡಿ ತೋರಣವ ಕಟ್ಟಿದೆನೆಯ್ಯಾ
ಲಿಂಗ ಬಾರಯ್ಯ. ಎನ್ನ ದೇವ ಬಾರಯ್ಯ
ಎನ್ನಂತರಂಗದ ಪರಂಜ್ಯೋತಿ ಬಾರಯ್ಯ
ನಿಮ್ಮನಾನಿದಿರುಗೊಂಬೆ ಬಾರಯ್ಯ" (ಪು.೩೨,ವ.೬೧)

ಅಂತರಂಗ ಬಹಿರಂಗದಿಂದ ಪರಿಶುದ್ಧನಾಗಿ ಲಿಂಗದೇವ

ನನ್ನು ಬರಮಾಡಿಕೊಳ್ಳುವ ಸುಂದರ ರೋಮಾಂಚಕ ಸನ್ನಿವೇಶ ವನ್ನು ಈ ವಚನದಲ್ಲಿ ಕಾಣಬಹುದು. 'ಲಿಂಗ ಬಾರಯ್ಯ, ಎನ್ನ ದೇವ ಬಾರಯ್ಯ, ಎನ್ನಂತರಂಗ ಪರಂಜ್ಯೋತಿ ಬಾರಯ್ಯ' ಎಂದು ಕರೆಯುವ ಕರುಳಿನ ಕಕ್ಕುಲಾತಿ ಇಲ್ಲಿದೆ. ಲಿಂಗವನ್ನು ಪೂಜಿಸಿ ಲಿಂಗವೇ ಆಗುವ ಪರಿಯಿದು. ಲಿಂಗದರ್ಶನವಾದಂತೆ ಕವಿದ ಕತ್ತಲೆ ಕರಗುತ್ತದೆ, ಮನದ ಮಾಲಿನತೆ ಮಾಯವಾಗು ತ್ತದೆ, ಅಜ್ಞಾನವಳಿದು ಸುಜ್ಞಾನಪ್ರಭೆ ಬೆಳಗುತ್ತದೆ. ಈ ಲಿಂಗ ದೇವನಲ್ಲಿ ಒಂದಾಗಿ ಚಂದಾಗಿ ಬೆರೆತಾಗ ಆಗುವ ಸುಖದ ಸಂವೇ ದನೆಯ ಸಹಜ ವರ್ಣನೆಯೇ ಈ ವಚನದಲ್ಲಿ ಪ್ರತಿಬಿಂಬಿತ ವಾಗಿದೆ.

"ಬಾಲಕ ಹಾಲ ಸವಿದಂತೆ
ಮರುಳಿನ ಮನದ ಹರುಷದಂತೆ
ಮೂಗ ಕಂಡ ಕನಸಿನಂತೆ, ವೈಯರಿಯದ ನೆಳಲಿನಂತೆ
ಬಂಜೆಯ ಮನದ ನೇಹದಂತೆ
ಮಹಾಲಿಂಗ ಗಜೇಶ್ವರನೊಲವು ನೋಡವ್ವ"

(ಪು. ೧೮ ವ. ೩೩)

ನಿಜವಾಗಿಯೂ ಇದೊಂದು ಅವರ್ಣನೀಯ ಅನುಪಮ ವಚನ. ಭಾವ-ಭಾಷೆ ಶಕ್ತಿಪೂರ್ಣ. ಮಾರ್ಗದರ್ಶಿ, ಸೂತ್ರ ಪ್ರಾಯ ಮುತ್ತಿನಂತಹ ಮಾತುಗಳ ಮಡು. ಗುರು ಲಿಂಗಜಂಗ ಮವನ್ನು ವಿಭೂತಿ ರುದ್ರಾಕ್ಷಿ ಮಂತ್ರದಿಂದ ಜಪಿಸಿ, ಪಾದೋ ದಕ ಪ್ರಸಾದ ಪಡೆಯುವುದೇ ವೀರಶೈವ ಧರ್ಮದಲ್ಲಿ ಬೆಳೆದುಂ ಬಂದ ರೀತಿ; ನೀತಿ. ಈ ಗುರಿ ಸಾಧನೆಗಾಗಿ ಅಷ್ಟಾವರಣಗಳೇ ಅಂಗ, ಪಂಚಾಚಾರವೇ ಪ್ರಾಣ; ಷಟ್‌ಸ್ಥಲಗಳೇ ಆತ್ಮವಾಗಿವೆ. ಈ ಸಾಧನೆ ಸಿದ್ಧಿಯ ಸವಿಯ ಫಲವನ್ನು ಈ ವಚನದಲ್ಲಿ ವರ್ಣ

ಸಲಾಗಿವೆ. ಮೂಗ ಕಂಡ ಕನಸು ಎಂಬ ಇತ್ಯಾದಿ ಐದು ಉದಾಹರಣೆಗಳ ಮೂಲಕ ವಿವರಿಸಿರುವುದರಿಂದ ಓದುಗನಿಗೆ ಈ ವಚನದ ರಹಸ್ಯವನ್ನು ಅರಿತುಕೊಳ್ಳಲು ಪೋಷಕವಾಗಿದೆ.

ಷಟ್‌ಸ್ಥಲದ ಮರ್ಮವನ್ನು ಒಂದೇ ವಚನದಲ್ಲಿ ನಿರೂಪಿಸಿರುವುದು ಅವರ ಅನುಭವಕ್ಕೆ ಹಿಡಿದ ಕನ್ನಡಿಯಾಗಿದೆ ಈ ವಚನ.

"ಹೊಸ ಮದುವೆ ಹಸೆಯುಡುಗದ ಮುನ್ನ
ಹೊಸದರಿಸಿನ ಬಿಸಿಲಿಂಗೆ ಹರಿಯದ ಮುನ್ನ
ತನು ಸಂಚಲವಡಗಿ ಮನ ಗುರುಕಾರುಣ್ಯವ ಪಡೆದು
ಹುಸಿಯಿಲ್ಲದಿರ್ದಡೆ ಭಕ್ತರೆಂಬೆ
ಹಿಡಿಯಲಿಲ್ಲದಿರ್ದಡೆ ಮಾಹೇಶ್ವರನೆಂಬೆ
ತನುವಿಲ್ಲದಿರ್ದಡೆ ಪ್ರಸಾದಿಯೆಂಬೆ
ಆಶೆಯಿಲ್ಲದಿರ್ದಡೆ ಶರಣನೆಂಬೆ.
ಈ ಐದರ ಸಂಪರ್ಕ ನಿರ್ಭೋಗವಾದಡೆ ಐಕ್ಯನೆಂಬೆ.
ಐಕ್ಯದ ಸಂತೋಷ ಹಿಂಗಿದಡೆ ಜ್ಯೋತಿರ್ಮಯನೆಂಬೆ"
(ಪು.೧೬, ವ. ೩೦)

ಭಕ್ತ-ಜಂಗಮ ಹೇಗಿರಬೇಕೆಂಬುದಕ್ಕೆ ಈ ವಚನ :

ಭಕ್ತನ ಮಠಕ್ಕೆ ಜಂಗಮ ಬಂದು
ಆ ಭಕ್ತ ಮಾಡಿದಂತೆ ಭಕ್ತಿಯ ಮಾಡಿಸಿಕೊಂಡು
ಕ್ಷಮಿಸಬಲ್ಲಡೆ ಜಂಗಮ.
ಆ ಕ್ಷಮೆಯೊಳಗೆ ಮಗ್ನನಾಗಬಲ್ಲಡೆ ಭಕ್ತ
ಹೀಗಲ್ಲದೆ ಉಪಾಧಿಗೆ ಹೇಳಿ ಮಾಡಿಸಿಕೊಂಬನ್ನಕ್ಕ
ಭೂತಪ್ರಾಣಿ,

ಬಂದ ಪರಿಯಲ್ಲಿ ಪರಿಣಾಮಿಸಬಲ್ಲಡೆ ಲಿಂಗಪ್ರಾಣಿ.
ಬೇಡಿದಲ್ಲದೆ ಮಾಡೆನೆಂಬನ್ನಕ್ಕ ಫಲದಾಯಕ.
ಬಂದ ಜಂಗಮದ ಇಂಗಿತಾಕಾರವನರಿದು
ಬೇಡದ ಮುನ್ನವೆ ಮಾಡಬಲ್ಲಡೆ ಸದ್ಭಕ್ತನೆಂಬೆನು
ಬೇಡದ ಮುನ್ನವೆ ಮಾಡುವ ಭಕ್ತ
ಬೇಡದೆ ಮಾಡಿಸಿಕೊಂಬ ಜಂಗಮ
ಇವೆರಡರ ಸಮ್ಮೇಳನದ ಸನ್ನಿಧಿಯಲ್ಲಿದ್ದು
ನಾನು ಸುಖಿಯಾದೆನಯ್ಯಾ ಮಹಾಲಿಂಗಗಜೇಶ್ವರಾ

(ಪು. ೧೭, ವ. ೩೨)

ಭಕ್ತ-ಜಂಗಮರ ಸಾಮರಸ್ಯದ ಸವಿಫಲ ಪಡೆಯುವ ದಾರಿಯನ್ನು ಈ ವಚನದಲ್ಲಿ ಬಹುಸರಳವಾಗಿ ನಿವೇದಿಸಲಾಗಿದೆ. ಈ ದೆಸೆಯಲ್ಲಿ ಅಂಬಿಗರ ಚೌಡಯ್ಯನ ಒಂದು ವಚನವನ್ನು ಗಮನಿಸಬೇಕು! ಅದು ಹೀಗಿದೆ !

"ಕುಲಹೀನ ಶಿಷ್ಯಂಗೆ ಅನುಗ್ರಹಮಾಡಿ,
ತಿರುಗಿ ಅವನ ಮನೆಯಲ್ಲಿ ಉಣ್ಣಬಾರದೆಂದು
ಅಕ್ಕಿ ಕಣಕವಕೊಂಡು ಹೋಗುವ ಗುರುವಿನ ಕಂಡರೆ
ಕೆಡವಿ ಹಾಕಿ ಮೂಗನೆ ಕೊಯ್ದು
ಇಷ್ಟಲಿಂಗಿಯ ಕಲ್ಲಿಲೆ ತಿಕ್ಕಿ
ಸಾಸಿವೆಯ ಹಿಟ್ಟನೆ ತಳಿದು
ಮೇಲೆ ಲಿಂಬಿಯ ಹುಳಿಯನೆ ಹಿಂಡಿ
ಪಡುವಣ ಗಾಳಿಗೆ ಹಿಡಿಯೆಂದಾತ
ನಮ್ಮ ಅಂಬಿಗರ ಚೌಡಯ್ಯ."

'ಬೇಡದ ಮುನ್ನವೆ ಮಾಡುವ ಭಕ್ತ ಬೇಡದೆ ಮಾಡಿಸಿಕೊಂಬ ಜಂಗಮ'ರಿಂದ ಮಾತ್ರ ಜಗದೋದ್ಧಾರವಾಗಬಲ್ಲುದು: ಧರ್ಮೋದ್ಧಾರವಾಗಬಲ್ಲುದು. ಭಕ್ತ-ಜಂಗಮರ ಲಕ್ಷಣಗಳಿವು ಎಂಬುದನ್ನು ಬಹು ಸಹಜವಾಗಿ ವಿವರಿಸಲಾಗಿದೆ. ಸಮಾಜದ ಭಾವೈಕ್ಯತೆ ಸಾಮರಸ್ಯಕ್ಕೆ ಈ ಮಾತುಗಳು ನಾಂದಿ ನುಡಿಯುತ್ತವೆ. ಲಿಂಗವಂತರಿಗೆ ಲಿಂಗವೇ ಪ್ರಾಣ; ಜೀವ ಜೀವಾಳ. ಲಿಂಗ ಬಿಟ್ಟರೆ ಯಾವುದೂ ಇಲ್ಲ. ಲಿಂಗವನ್ನು ಸದಾ ಧರಿಸಬೇಕು. ಒಂದುವೇಳೆ ಲಿಂಗವನ್ನು ಅಗಲಿದರೆ ಏನಾಗುತ್ತದೆ ಎಂಬುದನ್ನು ಬಹುಸುಂದರವಾಗಿ ಬಂಧುರವಾಗಿ ಉದಾಹರಣೆಯೊಂದಿಗೆ ವಿವರಿಸಿದ ವಚನವಿದು :

"ಕೋಗಿಲೆಗಳು ಹಳುವಟ್ಟು ಹೋದ ಬನದಂತಾದೆ ನೋಡವ್ವಾ
ರಾಮರಾಡಿದ ಹೊಳಲಿನಂತಾದೆ ನೋಡವ್ವಾ
ಜವ್ವನಗಳು ಬಳಲ್ದ ಸ್ತ್ರೀಯ ಮುಖಕಾಂತಿಯಂತಾದೆ ನೋಡವ್ವಾ
ಪರಿಮಳವಿಲ್ಲದ ಪುಷ್ಪದಂತಾದೆ ನೋಡವ್ವಾ
ಚಂದ್ರನಿಲ್ಲದ ನಕ್ಷತ್ರದಂತಾದೆ ನೋಡವ್ವಾ
ಮಹಾಲಿಂಗಗಜೇಶ್ವರನನಗಲುವದರಿಂದ;
ಸಾವುದು ಸುಖ ನೋಡವ್ವಾ. (ಪು. ೧೯ ವ. ೨೪)

ಲಿಂಗದೇವನೇ ವೀರಶೈವರಿಗೆ ಸರ್ವಸ್ವ. ಹೆಣ್ಣುಮಗಳ ಎಂಟು ತಿಂಗಳು ಗರ್ಭಿಣಿಯಿರುವಾಗ ಲಿಂಗಧಾರಣೆ ಮಾಡುವ ಶ್ರೇಷ್ಠ ಪರಂಪರೆ ಬೆಳೆದು ಬಂದಿದೆ. ಆನಂತರ ಗುರುವಿನ ಮುಖಾಂತರ ಕರಕಮಲಕ್ಕೆ ಲಿಂಗ ಬಂದ ನಂತರ ಜೀವನದ ಕೊನೆಯ ಉಸಿರು ಇರುವವರೆಗೂ ಅದು ದೇಹದ ಮೇಲೆ

ಇರಲೇಬೇಕು. ಮಗ್ಗೆಯ ಮಾಯಿದೇವರು ಸುಮ್ಮನೆ ಧರಿಸುವದು ಅತ್ಯಧಿಕವೆಂದು ಹೇಳಿರುವದನ್ನು ಗಮನಿಸಬೇಕು. ದೇಹದ ಮೇಲೆ ಲಿಂಗಧರಿಸುವುದರಿಂದ ಸಹಜವಾಗಿ ಸಂಸ್ಕಾರ ದೊರೆಯುತ್ತದೆ. ಆ ಲಿಂಗವೇ ತಂದೆ-ತಾಯಿ-ಬಂಧು-ಬಳಗ ಸರ್ವಸ್ವ. ದೇಹ ಬಿಟ್ಟಾಗಲೂ ಆತನೊಬ್ಬನೇ ಸಂಗಡ ಬರುವವನು. ಆದುದರಿಂದ ಲಿಂಗಧಾರಣೆಗೆ ವಿಶೇಷ ಮಹತ್ವವಿದೆ. ಈ ಲಿಂಗವಿರಹದ ಅನುಪಾತವನ್ನು ಇಲ್ಲಿ ಮುಸಣಯ್ಯನು ಮನೋಜ್ಞವಾಗಿ ಮನೋಹರವಾಗಿ ವಿವರಿಸಿದ್ದಾನೆ. ದುರ್ದೈವದ ದುರಂತವೆಂದರೆ ಇಂದಿನ ನವನಾಗರಿಕತೆಯ ಕಾಲದಲ್ಲಿ ಲಿಂಗವೇಕೇ ಬೇಕ ಎಂಬ ಸಂದೇಹವನ್ನು ವ್ಯಕ್ತಮಾಡುತ್ತಿರುವದು ಗೋಚರಿಸುತ್ತದೆ. ಶರಣರ ಸಮಗ್ರ ವಚನಗಳನ್ನು ಚೆನ್ನಾಗಿ ಅಭ್ಯಾಸ ಮಾಡಿದರೆ ಲಿಂಗತತ್ವ ಮಹೋನ್ನತಿ ತಿಳಿದು ಬರುತ್ತದೆ. ಈ ದಿಸೆಯಲ್ಲಿ ಈ ವಚನಗಳು ಬಹು ಪ್ರಯೋಜನಕಾರಿಯಾಗಿವೆ. ನಡೆ-ನುಡಿ ಒಂದಾದರೆ ಅಲ್ಲಿ ಲಿಂಗದರ್ಶನ ಸಹಜವಾಗಿ ದೊರೆಯುವದು. ಲಿಂಗತತ್ತ್ವದ ವಿಕಾಸದಿಂದ ಇಂದಿಗೂ ಅನೇಕ ಮಹಾನುಭಾವರು ಅಲೌಕಿಕವಾದ ಕಾರ್ಯಗಳನ್ನು ನೆರವೇರಿಸುತ್ತಿದ್ದಾರೆ. ಲಿಂಗದ ವಿರಹವೇದನೆಯನ್ನು ವರ್ಣಿಸುವ ಮುಸಣಯ್ಯನವರ ವಚನಗಳು ಅಪೂರ್ವವಾಗಿವೆ. ಅವುಗಳನ್ನು ಜೀರ್ಣಿಸಿಕೊಂಡಷ್ಟು ಅರ್ಥ ಹೊರಬರುತ್ತದೆ. ಭಾವಸ್ಫುಟಗೊಳ್ಳುತ್ತದೆ. ವ್ಯಾವಹಾರಿಕ ದೃಷ್ಟಾಂತಗಳು ತಿಳುವಳಿಕೆಯನ್ನು ನೀಡುವದರಲ್ಲಿ ಸಹಾಯಕವಾಗುತ್ತವೆ.

"ಆತನ ಬೆರಸಿದ ಕೂಟವನೇನೆಂದು ಹೇಳುವೆನವ್ವಾ?
ಕೇಳಲೂ ಬಾರದು. ಹೇಳಲೂ ಬಾರದು; ಏನು ಹೇಳುವೆನವ್ವಾ ?

ಶಿಖಿ ಕರ್ಪುರವ ಬೆರಸಿದಂತೆ
ಮಹಾಲಿಂಗ ಗಜೇಶ್ವರನ ಕೂಡಿದ ಕೂಟವ ಹೇಳಲೂ
ಬಾರದವ್ವಾ" (ಪು. ೮, ವ. ೧೩)

ಲಿಂಗಾಂಗ ಸಾಮರಸ್ಯದ ಸವಿಸುಖದ ಸೊಬಗನ್ನು, ಸೊಗಸನ್ನು, ಸಡಗರವನ್ನು ಇನ್ನೊಬ್ಬರ ಮುಂದೆ ಹೇಳಲು ಸಾಧ್ಯವಿಲ್ಲ; ಹೇಳಲೂ ಬಾರದು, ಕೇಳಲೂ ಬಾರದು. ತಾನುಂಬ ಊಟವನ್ನು, ತಾನುಂಬ ರತಿಸುಖವನ್ನು ತಾನೇ ಅನುಭವಿಸಬೇಕು ತಾನೇ! ಇನ್ನೊಬ್ಬರಿಂದ ಮಾಡಿಸಲು ಬಾರದು. ಉದಾತ್ತವಾದ ತತ್ತ್ವವಿದು. ತನ್ನ ದೇವರನ್ನು ತಾನೇ ಪೂಜೆ ಮಾಡಬೇಕೇ ವಿನಾ ಬೇರೆ ಮತ್ತೊಬ್ಬರಿಂದ ಮಾಡಿಸಕೂಡದು. ಅದು ಶಿಖಿ ಕರ್ಪುರವ ಬೆರೆಸಿದಂತಿರಬೇಕು. ಏಕದೇವೋಪಾಸನೆಯ ದಿವ್ಯ ತತ್ತ್ವವನ್ನು ಇಲ್ಲಿ ಎತ್ತಿಹೇಳಲಾಗಿದೆ. ದೇವರು ಎಲ್ಲಿಯೂ ಇಲ್ಲ. ಪ್ರತಿಯೊಬ್ಬ ಮಾನವನ ಹೃದಯದಲ್ಲಿಯೇ ಇದ್ದಾನೆ. ಆತನ ಸಾಕ್ಷಾತ್ಕಾರಕ್ಕಾಗಿ ಗುಡಿಗುಂಡಾರಗಳನ್ನು ಸುತ್ತಬೇಕಾಗಿಲ್ಲ, ತೀರ್ಥಯಾತ್ರೆ ಕೈಕೊಳ್ಳಬೇಕಾಗಿಲ್ಲ. ಚಿತ್ತಶುದ್ಧಿಯಿಂದ ತನ್ನ ಆತ್ಮಸ್ವರೂಪಿಯಾದ ಲಿಂಗದೇವನನ್ನು ಪೂಜಿಸಿದರೆ ಸಾಕು.

"ಗಿಡಮರದ ಕುರುಬಿತಿಯ ಜವ್ವನದಂತೆ
ನುಡಿಯಲರಿಯದೆ ಮುಗ್ಧೆಯಾಗಿರ್ದೆನವ್ವಾ.
ಹಗಲನರಿಯದ ಜಕ್ಕವಕ್ಕಿಯಂತೆ
ಮನದ ಸುಖವ ಬಯಸುತಿರ್ದೆನವ್ವಾ.
ಹಲವು ಕಾಲ ಎಲವದ ಮರವ ಸಾರಿರ್ದ ಅರಗಿಳಿ
ಯಂತಾದೆನವ್ವಾ.
ಇಂದೆಮ್ಮ ಮಹಾಲಿಂಗ ಗಜೇಶ್ವರನ

ನೆರೆಯಲರಿಯದೆ, ಇವರೆಲ್ಲರ ವಿಧಿಯ ಹೊತ್ತೆನವ್ವಾ"
(ಪುಟ. ೧೮, ವ. ೩೩).

ವಿರಹತೆ ವಿಕಳತೆಯ ವಿಪರೀತ ಭಾವವು ಈ ವಚನದಲ್ಲಿ ಅದೆಷ್ಟು ಯಥಾರ್ಥವಾಗಿ ಮೂಡಿನಿಂತಿದೆ.

ಕಂಗಳ ಕಾಳಗ, ನೋಟದ ಮಸಕ
ಮಿಂಚಿನ ಗೊಂಚಲು ತಾಗಿದಂತಾದೆನವ್ವಾ.
ತಾರಕಿ–ತಾರಕಿ ಸೂಸಿದಂತೆ, ಅರಗಿನ ಬಳ್ಳಿ
ಹಬ್ಬಿದಂತವ್ವಾ
ಓರೆಕೋರೆ ಕೆಂಪಾದವವ್ವಾ ಆಳುಗಳಿನ್ನಾರೊ ?
ಐದು ರೂಹನೊಂದು ಮಾಡಿ ಕಾದಿ ಗೆದ್ದು ಸೋತು
ಹೊರವಂಟು ಹೋದೆನವ್ವಾ,
ಮಹಾಲಿಂಗ ಗಜೇಶ್ವರ ಕಂಗಳ ಕಾಳಗದ ಮಾಸಾಳು.
(ಪು. ೧೦, ವ. ೧೭)

ಮನದ ವಿಕಾರಗಳನ್ನು ಗೆದ್ದ ಬಗೆ ಇಲ್ಲಿದೆ.
ಪಂಚೇಂದ್ರಿಯ ಕರ್ಮೇಂದ್ರಿಯಗಳನ್ನು ಗೆದ್ದ ರೀತಿ ಇಲ್ಲಿದೆ.
ಮಾನವನು ದೇವಮಾನವನಾಗುವ ಹದವೂ ಇಲ್ಲಿದೆ.

'ಲಿಂಗದೇಹಿ ಸದಾಶುಚಿ' ಎಂಬಂತೆ ಅವನನ್ನು ಯಾವದೂ ಬಾಧಿಸಲಾರದು; ಎಲ್ಲ ಅಂಗಗಳೂ ಲಿಂಗಾಂಗಗಳಾದಾಗ, ಕಾಯವೇ ಪ್ರಸಾದ ಕಾಯವಾದಾಗ ಅವನು ಕಾಲಕರ್ಮ ವಿರ-ಹಿತನು. ಆದುದರಿಂದ ಲಿಂಗದೇವನನ್ನು ಎಂದಿಗೂ ಅಗಲ ಬಾರದು. ಆತನೇ ಸರ್ವಸ್ವ; ಪ್ರಾಣಪದಕ. ಕೋಟಿ ಹಣ ಬಂದು ಬಿದ್ದರೂ ಆ ಲಿಂಗದೇವನಿಗೆ ಸಮಾನವಾದುದು ಮತ್ತೊಂದಿಲ್ಲ; ಇನ್ನೊಂದಿಲ್ಲ. ಮಡಿಕೆ ದೈವ, ಬೀದಿಯ ಕಲ್ಲು

ದೈವ, ದೈವ ದೈವವೆಂದು ಕಾಲಿಡಲು ಇಂಬಿಲ್ಲ. ಅನಂತ ದೈವಗಳಿವೆ. ಆದರೆ ದೇವನೊಬ್ಬನೆ. ಆತನೆ ಲಿಂಗದೇವ.

ಇನ್ನೊಂದು ಮನೋಜ್ಞವಾದ ಮಾರ್ಮಿಕ ವಚನವಿದು:

'ಮಾಗಿಯ ಹುಲ್ಲಿನ ಸೋಂಕಿನಂತೆ
ತನು ಪುಳಕಿತಳಾಗಿರ್ದಳವ್ವ
ನುಡಿ ತೊದಲು, ಅವನ ಒಲವೆ ಆಧಾರವಾಗಿರ್ದಳವ್ವ
ಬಿಳಿಯ ತುಂಬಿ ಕುಂಕುಮದ ರಜದಲ್ಲಿ ಬಂದುಂಡಂತೆ
ಮಹಾಲಿಂಗ ಗಜೇಶ್ವರನಲ್ಲಿ, ತನ್ನಲ್ಲಿ ತಾನೆ
ರತಿಯಾಗಿರ್ದಳವ್ವ!'
(೧೨-೨೧)

ಅಂಗಾಂಗಗಳೆಲ್ಲವು ಲಿಂಗಮಯವಾದ ಪರಿಯಿದು. ಮಾಂಸಪಿಂಡವಳಿದು ಮಂತ್ರಪಿಂಡವಾದ ಬಗೆಯಿದು. ನರಜನ್ಮವ ತೊಡೆದು ಹರಜನ್ಮವ ಮಾಡಿದ ನಿಲವಿದು, ಜೀವಾತ್ಮ-ಪರಮಾತ್ಮನಾದ ರೀತಿ ಇದು. ಲಿಂಗಾಂಗ ಸಾಮರಸ್ಯದ ಚರಮ-ಪರಮ ಸೀಮೆ ಇದು. ಇದಕ್ಕಿಂತಲೂ ಕಾವ್ಯಮಯವಾಗಿ ಹೇಳಲು ಸಾಧ್ಯವೇ ಇಲ್ಲ. ಅದೆಷ್ಟು ಸೂಕ್ಷ್ಮವಾಗಿ, ನವಿರಾಗಿ ಭಾವನೆಗಳ ಅಲೆಗಳನ್ನು ಇಲ್ಲಿ ಜೋಡಿಸಿದ್ದಾನೆ ಮಸಣಯ್ಯ. ಅವನ ಅನುಭವ-ಅನುಭಾವ ವೈಶಿಷ್ಟ್ಯಪೂರ್ಣ, ಅರ್ಥಪೂರ್ಣ. ದೇವನೊಂದಿಗೆ ಒಂದಾದ ಬಗೆಯನ್ನು ತಿಳಿಸುವ ಮೋಡಿ, ವೈಖರಿ ಆಶ್ಚರ್ಯಕರ. ಮಾನವನು ಮಹಾಮಾನವನಾಗಿ ದೇವಮಾನವನಾಗಬೇಕಾದರೆ ಲಿಂಗತತ್ವವನ್ನು ಅಳವಡಿಸಿಕೊಂಡಾಗಲೇ ಸಾಧ್ಯವಾಗುವದು. ಇದು ಅತ್ಯಂತ ಸರಳವಾದ, ಸುಲಭವಾದ ಮಾರ್ಗ. ಅಂತೆಯೇ ಹಠಯೋಗ, ಲಯಯೋಗ,

ರಾಜಯೋಗ, ಮಂತ್ರಯೋಗ ಮೊದಲಾದವುಗಳಿಗಿಂತಲೂ 'ಲಿಂಗಾಂಗಯೋಗ' ಶ್ರೇಷ್ಠವಾದದ್ದು. ಇದು ಶಿವಯೋಗ. ಆದುದರಿಂದಲೇ ಮೈಲಾರ ಬಸವಲಿಂಗಶರಣರು—

"ಹಲವು ಯೋಗವ ಮಾಡಿ ಫಲವೇನು ಮಗನೆಯೆಂ-
ದೊಲಿದು ಲಿಂಗಾಂಗ ಸುಲಭ ಯೋಗವ ನೋಡ-
ಗಲಿಸಿದ ಗುರುವೆ ಕೃಪೆಯಾಗು"[೧]

ಎಂಬುದಾಗಿ ಮುಕ್ತಕಂಠದಿಂದ ಹಾಡಿ ಹೊಗಳಿರುವದನ್ನು ಇಲ್ಲಿ ಗಮನಿಸಬೇಕು. 'ಶಿವಯೋಗ' ಭಾರತೀಯ ಆಧ್ಯಾತ್ಮ ಕ್ಷೇತ್ರಕ್ಕೆ ಶರಣರು ಕೊಟ್ಟ ಅಮೋಘ ಕಾಣಿಕೆಯೆಂಬುದನ್ನು ಮರೆಯಲಾಗದು.

"ಎನ್ನ ಕಡೆಗಣ್ಣು ಕೆಂಪಾಯಿತವ್ವಾ
ಎನ್ನ ನಳಿತೋಳು ಉಡುಗಿದವವ್ವಾ
ಇಕ್ಕಿದ ಹವಳದ ಸರ ಬೆಳುಹಾದವವ್ವಾ
ಮುಕ್ತಾ ಫಳಹಾರದಿಂದ ಆನು ಬೆಂದೆನವ್ವಾ
ಇಂದೆನ್ನ ಮಹಾಲಿಂಗ ಗಜೇಶ್ವರನು.
ಬಹಿರಂಗವನೊಲ್ಲದೆ ಅಂತರಂಗದಲ್ಲಿ ನೆರೆದ ಕಾಣೆ ಅವ್ವಾ"
(ಪು. ೩೦, ವ. ೫೭)

ಇಲ್ಲಿ ಪತಿ ಯಾರು, ಸತಿ ಯಾರು ಎಂಬ ಭೇದ-ಭಾವನೆಗಳೇ ಅಳಿದುಹೋಗಿವೆ. ಎರಡೂ ಒಂದಾದ ಸ್ಥಿತಿಯನ್ನು ವರ್ಣಿಸಲಾಗಿದೆ. ಬಯಲು ಬಯಲನೇ ಬೆರೆತ ರೀತಿಯಿದು.

---

೧. ಮೈಲಾರ ಬಸವಲಿಂಗಶರಣರ ಕೃತಿಗಳು—ಸಂ. ಶಿ. ಶಿ. ಬಸವನಾಳ, ಪು. ೧೦೬

ಲಿಂಗತತ್ತ್ವದ ವೈಚಾರಿಕ, ವೈಜ್ಞಾನಿಕ ವಿವೇಚನೆಯೇ ಇವರ ವಚನಗಳ ಪ್ರಮುಖ ಲಕ್ಷಣ. ಈ ವಚನವನ್ನು ಅವ-ಲೋಕಿಸಬಹುದು;

"ದೇವರ ನೆನೆದು ಮುಕ್ತರಾದೆವೆಂಬ
ಯುಕ್ತಿ ಶೂನ್ಯರ ಮಾತ ಕೇಳಲಾಗದು
ಅದೇನು ಕಾರಣವೆಂದಡೆ
ದೇವರ ನೆನೆವವರಿಗೆ ದೇವರುಂಟೆ ?
ದೂರದಲ್ಲಿದ್ದವರ ನೆನೆವರಲ್ಲ
ಸಮೀಪದಲ್ಲಿದ್ದವರನಾರೂ ನೆನೆಯಲಿಲ್ಲ
ಇದನರಿದು ನಿನ್ನೊಳಗಡಗಿ ನಾನಿನ್ನ ನೆನೆಯಲಿಲ್ಲ;
ನನ್ನೊಳಗಡಗಿ ನೀನೆನಗೆ ಮುಕ್ತಿಯನೀಯಲಿಲ್ಲ
ಇದು ಕಾರಣ ನಾ ನೀನೆನಲಿಲ್ಲ ಮಹಾಲಿಂಗ ಗಜೇಶ್ವರಾ"

(ಪು. ೧೩, ವ. ೨೪)

ಆಡಂಬರದ ಡೊಂಬರಾಟವನ್ನು, ಮಾತಿನಲ್ಲಿ ಮಾತಿಲ್ಲದ ವಂಚಕ ವಾಚಾಳಿಗಳನ್ನು ಕುರಿತು ಕಠೋರವಾದ ವಿಡಂಬನೆ ಇಲ್ಲಿದೆ. ನಿತ್ಯಸತ್ಯವನ್ನೇ ಬಹು ಸೊಗಸಾಗಿ ತಮ್ಮ ವಚನಗಳಲ್ಲಿ ಪ್ರತಿಬಿಂಬಿಸಿದ್ದಾರೆ. ಅಂತೆಯೇ ಶರಣರು ಮಹಾ ದಾರ್ಶನಿಕರು; ಭೂತ, ವರ್ತಮಾನ ಭವಿಷ್ಯಗಳನ್ನು ಬಲ್ಲವರು. ಚಿರಂತನ ಸತ್ಯವನ್ನೇ ಎತ್ತಿ ಹಿಡಿದಿದ್ದಾರೆ. ಗಜೇಶ ಮಸಣಯ್ಯನ ದಿವ್ಯ ಸಂದೇಶ ಇಂದಿಗೂ ಪಾಲಿಸುವಂತಿದೆ.

ಸ್ವಸ್ವರೂಪ ಜ್ಞಾನವರಿಯಲು ಲಿಂಗತತ್ತ್ವವನ್ನು ಜೀವನದಲ್ಲಿ ಅಳವಡಿಸಿಕೊಳ್ಳಬೇಕು. ಲಿಂಗದ ನೋಟ ಕೂಟ–ಮಾಟದಿಂದ ಹೃದಯವರಳುತ್ತದೆ. ಆತನ ಬರುವಿಗಾಗಿ ಜಾತಕ ಪಕ್ಷಿ-

ಯಂತೆ ಕಾಯಬೇಕಾಗುತ್ತದೆ. ಭಕ್ತನು ಲಿಂಗದೇವನ ಬರುವಿಕೆ-ಗಾಗಿ ಹಲುಬಿ ಹಂಬಲಿಸುತ್ತಿರುವ ಸಹಜವಾದ ಸನ್ನಿವೇಶವನ್ನು ಈ ವಚನದ ಮುಖಾಂತರ ಗಜೇಶ ಮಸಣಯ್ಯ ನಿರೂಪಿಸಿದ ವೈಖರಿ ಅದೆಷ್ಟು ಸಹಜ ಸುಂದರವಾಗಿದೆ ನೋಡಿ;

"ಮಾಘಮಾಸದ ನವಿಲಿನಂತಾದೆ ನೋಡವ್ವಾ
ಇರುಳು ತೊಳಲುವ ಜಕ್ಕವಕ್ಕಿಯಂತೆ
ಹಲವ ಹಲುಬುತಿರ್ದೆ ನೋಡವ್ವಾ
ಮಾಗಿಯ ಕೋಗಿಲೆಯಂತೆ ಮೂಗಿಯಾಗಿರ್ದೆ
ನೋಡವ್ವಾ
ಮಹಾಲಿಂಗ ಗಜೇಶ್ವರನ ಅನುಭಾವ ಸಂಬಂಧಗಳ
ಬರವು
ಎನ್ನ ಪ್ರಾಣದ ಬರವು ನೋಡವ್ವಾ"(ಪು. ೨೨. ವ. ೪೨)

ಲಿಂಗದ ಅಗಲುವಿಕೆಯ ವಿರಹತಾಪದ ವರ್ಣನೆ ಇಲ್ಲಿದೆ. ಲಿಂಗದೇವನಲ್ಲಿ ಒಂದಾದಾಗಲೇ ಮನಸ್ಸಿಗೆ ಶಾಂತಿ, ಸಮಾಧಾನ. ಅದೇ ನಿಜಭಕ್ತನ ಮನದಾಸೆ; ಹಿರಿದಾಸೆ. ನಿಜಭಕ್ತನು ಸದಾ ಲಿಂಗಾನುಗ್ರಹಕ್ಕಾಗಿ ಪರಿತಪಿಸಬೇಕು. ಗಜೇಶ ಮಸಣಯ್ಯ ಅನುಪಮ ಅನುಭಾವಿ; ಇಷ್ಟಲಿಂಗ ಪೂಜಾನಿಷ್ಠ. ಅನುಪಮ ಅನುಭಾವವನ್ನು ಅತ್ಯಂತ ಮನೋಹರವಾಗಿ ಮೇಲಣ ವಚನದಲ್ಲಿ ತಿಳಿಸಿದ್ದಾನೆ. ದಿನನಿತ್ಯ ಕಣ್ಣಿಗೆ ಕಾಣುವ ಉದಾಹರಣೆಗಳಂತೂ ಬಹು ಸೊಗಸಾಗಿವೆ. ಲಿಂಗವನ್ನು ಅಗಲಿದರೆ ಆಗುವ ವಿರಹದ ವರ್ಣನೆ ಎಷ್ಟು ಸಹಜವಾಗಿದೆ, ಇಲ್ಲಿ. ಮಾಘಮಾಸದ ನವಿಲಿನಂತೆ, ಇರುಳು ತೊಳಲುವ ಜಕ್ಕವಕ್ಕಿಯಂತೆ, ಕೊನೆಯ ಸಾದೃಶ್ಯವಂತೂ ಕೊನೆಯವರೆಗೂ ನೆನಪಿನಲ್ಲಿರುವಂತಹದು.

ಮಾಗಿಯ ಕೋಗಿಲೆಯಂತೆ ಮೂಗಿಯಾಗಿರ್ದೆ ನೋಡವ್ವ. ವಿರಹವೇದನೆಯ ಹೃದಯವಿದ್ರಾವಕ ದಾರುಣ ಸನ್ನಿವೇಶ ಕಣ್ಣಿಗೆ ಕಟ್ಟುವಂತಿದೆ. ಲೌಕಿಕ ಸತಿಯು ಅಗಲಿದ ತನ್ನ ಪತಿಗಾಗಿ. ವಿರಹ ಪಡುವಂತೆ ಗಜೇಶ ಮಸಣಯ್ಯ 'ಶರಣಸತಿ–ಲಿಂಗಪತಿ' ಮೃದುಮಧುರ ಭಾವನೆಗಳನ್ನು ಲಿಂಗದ ಅಗಲುವಿಕೆಯಿಂದಾಗುವ ವಿರಹತಾಪದ ಸಹಜ ವರ್ಣನೆಯನ್ನು ಮಾಡುವದರಲ್ಲಿ, ಅವನ ಅನುಭಾವ ಸಹಜವಾಗಿ ಹೊರಹೊಮ್ಮಿದೆ.

ಲಿಂಗವಿರಹಿಯ ಅನುತಾಪ ಕಳವಳ ಕೊರಗು ವ್ಯಥೆ ಹುಸಿಮುನಿಸು ಇವನ ವಚನಗಳಲ್ಲಿ ಸಹಜವಾಗಿ ಮೂಡಿಬಂದಿವೆ. ಲಿಂಗದೊಡನೆ ಬೆರೆತಾಗ ಆಗುವ ಆನಂದ, ಅನುರಾಗ, ಪುಳಕ, ರೋಮಾಂಚನ, ಪರವಶತೆ, ನಿಬ್ಬೆರಗು ಅತ್ಯಂತ ಹೃದಯಂಗಮವಾಗಿವೆ. ಲಿಂಗವನ್ನು ಪೂಜಿಸಿ ಲಿಂಗವೇ ಆಗುವ ಉದಾತ್ತ ಉನ್ನತ ಮನೋಧರ್ಮ ಇವನ ವಚನಗಳಲ್ಲಿ ಹಾಸುಹೊಕ್ಕಾಗಿದೆ. 'ನಂಬು ನಂಬಲೇ ಮನವೇ ನಂಬಿಗೆಯೇ ಕಾರಣವು ಶಂಭುನೊಲಿಯುವದಕೆ ಎಂದಿರುವ ಮುಪ್ಪಿನ ಷಡಕ್ಷರಿಯು ಇತನ ವಚನಗಳಿಂದಲೇ ? ಪ್ರಭಾವಿತನಾಗಿರಬಹುದೆಂದು ಊಹಿಸಲವಕಾಶವಿದೆ. ಚಂಚಲವಾದ ಮಂಗನಂತಹ ಮನಸ್ಸನ್ನು ದೃಢಮನಸ್ಸಿನಿಂದ ಏಕಾಗ್ರಗೊಳಿಸಿ ಲಿಂಗದಲ್ಲಿ ಕೇಂದ್ರೀಕರಿಸಿದರೆ ಲಿಂಗವೇ ತನ್ನೆಡೆಗೆ ಒಲಿದು ನಲಿದು ಬರುವುದರಲ್ಲಿ ಸಂದೇಹ ವಿಲ್ಲ. ನುಲಿಯ ಚಂದಯ್ಯನ ಕಥೆಯಂತೂ ಈ ದೃಷ್ಟಿಯಿಂದ ಸುಪ್ರಸಿದ್ಧವಿದೆ. ಸ್ನಾನ ಮಾಡುವಾಗ ಬಿದ್ದ ಲಿಂಗವನ್ನು ಎತ್ತಿಕೊಳ್ಳದೆ ಕಾಯಕಯೋಗಿಯಾದ ಚಂದಯ್ಯ ಹೊರಟು ನಿಂತಾಗ ಲಿಂಗವೇ ಆತನ ನೆರಳಿನಂತೆ ಬೆನ್ನತ್ತಿ ಹೋಗುವ ಸುಂದರ ಸನ್ನಿ

ವೇಶ ಶೂನ್ಯಸಂಪಾದನೆಯಲ್ಲಿ ಸೊಗಸಾಗಿ ವರ್ಣಿಸಲಾಗಿದೆ.

"ತಮ್ಮ ತಮ್ಮ ಗಂಡರು ಚೆಲುವರೆಂದು
ಕೊಂಡಾಡುವ ಹೆಣ್ಣುಗಳು ಪುಣ್ಯಜೀವಿಗಳವ್ವಾ
ನಾ ನಮ್ಮ ನಲ್ಲನೆಂಥವನೆಂದರಿಯೆನವ್ವಾ
ಮಹಾಲಿಂಗ ಗಜೇಶ್ವರದೇವ ನಿರಿಯುಸೆರಗ
ಸಡಿಲಿಸಲೊಡನೆ
ನಾನೆಂದರಿಯೆನವ್ವಾ" (ಪು. ೭, ವ. ೧೧)

ಲಿಂಗದೇವನ ಸ್ಪರ್ಶದಿಂದ ಉನ್ಮನಗೊಂಡ ಪುಳಕಿತಗೊಂಡ ತನುವನ್ನು 'ನಿರಿಯು ಸೆರಗ ಸಡಿಲಿಸಲೊಡನೆ' ಎಂಬ ಒಂದೇ ಮಾತಿನಿಂದ ಸಹಜವಾದ ಆನಂದವನ್ನು ಎತ್ತಿ ತೋರಿಸಿರುವುದು ಗಜೇಶ ಮಸಣಯ್ಯನ ಅಪಾರ ಅನುಭವಕ್ಕೆ ನಿಂತಾಂತ ನಿದರ್ಶನವೆನ್ನಬಹುದು. ಮನುಷ್ಯ ಸಹಜವಾದ ನಾಚುಕೆಯ ಸ್ವಭಾವದ ನವಿರಾದ ಭಾವನೆ ಮೇಲಣ ವಚನದಲ್ಲಿ ಸ್ಫುಟಗೊಂಡಿದೆ. ಗಂಡನ ಆಗಮನ ಆತನ ಸ್ಪರ್ಶದಿಂದಾಗುವ ಸುಖದ ಸುಂದರ ಭಾವನೆಗಳು ವಚನಗಳ ಮುಖಾಂತರ ಹೊರಹೊಮ್ಮಿವೆ.

ಕೋಮಲವಾದ ಭಾವನೆಗಳಿಗಾಗಿ ಈ ವಚನವನ್ನು ಪರಿಶೀಲಿಸಬಹುದು;

ಋತುಕಾಲ ತಪ್ಪಿದ ಕೋಗಿಲೆಯಂತೆ
ನುಡಿಯದಂತಿರ್ದಳಲ್ಲಾ!
ಪರಿಮಳ ತಪ್ಪಿದ ಭ್ರಮರನಂತೆ ಸುಳಿಸುಳಿ ಸುಳಿಗೊಳ್ಳು
ತ್ತಿರ್ದಳಲ್ಲಾ!
ಫಲವು ತಪ್ಪಿದ ಬಂಜೆ ಬನದೊಳಗಣ ಅರಗಿಳಿಯಂತಿ
ರ್ದಳಲ್ಲಾ!

ದುರಬರೆದ ಜವ್ವನದಲ್ಲಿ ತೋರಣದೆಲೆಯಂತಿರ್ದಳಲ್ಲಾ
ಮಹಾಲಿಂಗ ಗಜೇಶ್ವರನ ನೆರೆವ ಭರದಿಂದ
ಅಳಿಕಾವೃದ್ಧೆಯಾಗಿರ್ದಳಲ್ಲಾ !

ಅದು ಅಕ್ಕನ ವಚನದಂತೆ ಕಿಚ್ಚಿಲ್ಲದ ಬೇಗೆ. ಏರಿಲ್ಲದ ಗಾಯ, ಸುಖವಿಲ್ಲದ ಧಾವತಿ, ಸುಳಿದು ಬೀಸುವ ಗಾಳಿ ಉರಿಯಾಯಿತು.! ಬೆಳದಿಂಗಳು ಬಿಸಿಲಾಗಿದೆ. ಇವು ವಿರಹವೇದನೆಯ ಅಮರ ಗೀತಗಳಾಗಿ ಮಸಣಯ್ಯನವರ ಹೃದಯದಿಂದ ಹೊರ ಬಂದಿವೆ. ಲಿಂಗದ ವಿಕಳಾವಸ್ಥೆಯು ಈ ವಿರಹ ವೇದನೆ ಭಾವುಕರ ಮನ ಸೆಳೆಯುತ್ತದೆ. ಆರ್ದ್ರಹೃದಯಿಗಳನ್ನಾಗಿ ಮಾಡುತ್ತದೆ. ಆಧ್ಯಾತ್ಮಿಕ ರಸಾನಂದದಲ್ಲಿ ಮೀಯಿಸುತ್ತದೆ.

"ಕೋಗಿಲೆಗಳು ಹುಳುವಟ್ಟು ಹೋದ ಬನದಂತಾದೆ ನೋಡವ್ವಾ
ರಾಮರಾಡಿದ ಹೊಳಲಿನಂತಾದೆ ನೋಡವ್ವಾ
ಜವ್ವನಗಳು ಬಳಲ್ದ ಸ್ತ್ರೀಯ ಮುಖಕಾಂತಿಯಂತಾದೆ ನೋಡವ್ವಾ
ಪರಿಮಳವಿಲ್ಲದ ಪುಷ್ಪದಂತಾದೆ ನೋಡವ್ವಾ
ಚಂದ್ರನಿಲ್ಲದ ನಕ್ಷತ್ರದಂತಾದೆ ನೋಡವ್ವಾ
ಮಹಾಲಿಂಗ ಗಜೇಶ್ವರನಗಲುವದರಿಂದ
ಸಾವುದು ಸುಖ ನೋಡವ್ವಾ" (ಪು. ೧೯, ವ. ೩೫)

ಅಗಲುವಿಕೆಯ ಅನುತಾಪವನ್ನು ಅನೇಕ ದೃಷ್ಟಾಂತಗಳಿಂದ ಸ್ಪಷ್ಟಪಡಿಸುವ ರೀತಿ ಆಕರ್ಷಣೀಯವಾಗಿದೆ. ಹಾಗೆಯೇ ಇನ್ನೊಂದು ಉದಾಹರಣೆಯನ್ನು ಗಮನಿಸಬಹುದು;

"ಗಿಡುಮರದ ಕುರುಂಬಿಳಿಯ ಜವ್ವನದಂತೆ
ನುಡಿಯಲರಿಯದಂತೆ ಮುಗ್ಧೆಯಾಗಿರ್ದನವ್ವಾ.

ಹಗಲನರಿಯದ ಜಕ್ಕವಕ್ಕಿಯಂತೆ
ಮನದ ಸುಖವ ಬಯಸುತಿರ್ದೆನವ್ವಾ
ಹಲವು ಕಾಲ ಎಲವದಮರನ ಸಾರಿರ್ದ ಅರಗಿಳಿ
ಯಂತಾದೆನವ್ವಾ
ಇಂದೆಮ್ಮ ಮಹಾಲಿಂಗ ಗಜೇಶ್ವರನ
ನೆರೆಯಲರಿಯದೆ ಇವರೆಲ್ಲರ ವಿಧಿಯ ಹೊತ್ತೆನವ್ವಾ."
(ಪು. ೧೮, ವ. ೨೨)

'ಆದುದರಿಂದಲೇ ಹೊತ್ತು ಹೋಗದ ಮುನ್ನ ಪೂಜಿಸು ಕೂಡಲಸಂಗಮ ದೇವನ' ಎಂದು ಬಸವಣ್ಣನವರು ಹಲುಬಿ ಹಂಬಲಿಸಿದ್ದಾರೆ. ಲಿಂಗದೇವನ ಸಾಕ್ಷಾತ್ಕಾರಕ್ಕಾಗಿ ಕಾತರಿಸಿ-ದ್ದಾರೆ. ವೀರ ವಿರಾಗಿಣಿ ಅಕ್ಕಮಹಾದೇವಿಯಂತೂ ನೀನೊಲಿ-ದರೆ ಒಲಿ, ಒಲಿಯದಿರ್ದಡೆ ಮಾಣು ನಿನ್ನ ಹಾಡಿದಲ್ಲದೆ ಸೈರಿಸ ಲಾರೆನು, ಎಂದಿರುವ ಮುತ್ತಿನಂತಹ ಮಾತುಗಳು ಮನನೀಯ; ಗಮನೀಯ. 'ಲಿಂಗದೇಹಿ ಸ್ಸದಾ ಶುಚಿ' ಎಂಬಂತೆ ಲಿಂಗವನು ಎಂದಿಗೂ ಅಗಲಕೂಡದೆಂಬ ಭಾವ ಅರಳಿದೆ; ಪರಿಮಳ ಬೀರಿದೆ. ಒಂದು ಕ್ಷಣ ಅಗಲಿದರೆ ಆಗುವ ಅನುತಾಪವನ್ನು ವರ್ಣಿಸುವ ವೈಖರಿಗೆ ಮೇಲಣ ಎರಡು ವಚನಗಳು ಸಾಕ್ಷಿಯಾಗಿವೆ. ಲಿಂಗ ತತ್ತ್ವದ ವಿಜಯ ಪತಾಕೆಯನ್ನು ಎತ್ತಿಹಿಡಿದಿವೆ.

ಅನಂತಾನಂತ ಕಾಲ ನಿತ್ಯವೆಂಬರೀ ಸಂಸಾರ.
ಇದು ಹುಸಿ ಕಂಡೆಲವೊ
ಇಂದಿನಿಂದಿನ ಸುಖವಿಂದಿಂಗೆ ಪರಿಣಾಮ.
ದಿನದಿನದ ಸುಖ ಹುಸಿ ಕಂಡೆಲವೊ!

ಘನ ಘನವೆಂಬ ರೂಪಿಂಗೆ ಎರಡಿಲ್ಲಯ್ಯಾ;
ಮಹಾಲಿಂಗ ಗಜೇಶ್ವರನಲ್ಲಿ ತಿಳಿದು ನೋಡೆಲವೊ.

ಲೌಕಿಕ ಪ್ರಪಂಚವು ನೀರ ಮೇಲಣ ಗುಳ್ಳೆಯಂತೆ ಅಶಾಶ್ವತವಾದುದು. ಸಾಸುವೆ ಕಾಳಿನಷ್ಟು ಸುಖಕ್ಕೆ ಸಾಗರದಷ್ಟು ದುಃಖ ಅನುಭವಿಸಬೇಕಾಗುತ್ತದೆ. ಇದನ್ನೇ ನಂಬಿ ಅಮೂಲ್ಯವಾದ ಪ್ರಸಾದಕಾಯ ಕೆಡಿಸಿಕೊಳ್ಳಬೇಡವೆಂದು ಕರುಣಾಳುವಾಗಿ ಕೈಹಿಡಿದು ಮುನ್ನಡಿಸುವ (ಮಹಾಲಿಂಗ ಗಜೇಶ್ವರನಲ್ಲಿ ತಿಳಿದು ನೋಡೆಲವೋ ಎಂದು ಎಚ್ಚರಿಸುವ ಜಾಗೃತ ಗಂಟೆ ಬಾರಿಸಿದ್ದಾನೆ; ಗಜೇಶ ಮಸಣಯ್ಯ. ನಿತ್ಯ ಸತ್ಯ ತತ್ತ್ವವನ್ನು ಬಹು ಮನೋಹರವಾಗಿ ಬೋಧಿಸುವ ಈ ವಚನ ಚಿರಂತನ ಮೌಲ್ಯಗಳಿಂದ ಕೂಡಿದೆ. ನಿನ್ನರಿವೇ ನಿನಗೆ ಗುರು. ಅದನ್ನು ತಿಳಿದುಕೊಳ್ಳಲು ಪ್ರಯತ್ನಿಸು ಎನ್ನುವ ಪಾರಮಾರ್ಥಿಕ ಉನ್ನತ ವಿಚಾರಗಳು ಇಲ್ಲಿವೆ. ಪರಿಪೂರ್ಣ ಮಾನವನಾಗುವ ಮಹಾಮಾನವನಾಗುವ ಬಗೆಯನ್ನು ತೋರಿಸಿದ ಹಿರಿಮೆ ಇವನದು.

"ಅಖಂಡ ಪರಿಪೂರ್ಣಲಿಂಗ ತಾನೆಯಾದ ಶರಣಂಗೆ
ಲಿಂಗವೆಂಬುದೇನು ಹೇಳಾ ?
ಲಿಂಗ ಒಳಗೊ ಹೊರಗೊ ಎಂದು ಶಂಕಿಸಿ ನುಡಿವ
ಶಂಕಿತರವರಂತಿರಲಿ
ಮುನ್ನ ಮನ್ನವೇ ಮಹಾಲಿಂಗವಾದ ಬಳಿಕ
ಮತ್ತೇನೆಂದು ನೆನೆಯಲಿಲ್ಲ.
ಮಹಾಲಿಂಗ ಗಜೇಶ್ವರನಲ್ಲಿ ನಿಜೈಕ್ಯವಾದ ಶರಣಂಗೆ
ಮುಂದೆ ಒಂದೂ ಇಲ್ಲ ನಿಲ್ಲು ಮಾಣು."

(ಪು. ೩೪ ವ. ೬೬)

ಆದುದರಿಂದ,

'ಜಾತಸ್ಯ ಮರಣಂ' — ಆವಂಗೆಯೂ ತಪ್ಪದು
ಅಱಿದು ಮಱೆಯ ಬೇಡಯ್ಯ
ಉರಗನ ಬಾಯ ಕಪ್ಪೆಯಂತೆ, ಸಂಸಾರ ಹೆರೆಗೊಳು
ತ್ತಿರ್ದುದಲ್ಲಾ !
ರೋಮಜರು ಮೀನಜರು ಕಾಲಕಲ್ಪಿತಕ್ಕೊಳಗಾದರು
ಮಹಾಲಿಂಗ ಗಜೇಶ್ವರಯ್ಯನೊಬ್ಬನೆ ಶಾಶ್ವತನು
(ಪು. ೩೦ ವ. ೫೮)

ನಿತಾಂತ ಸತ್ಯವನ್ನು ಪ್ರತಿಬಿಂಬಿಸಿದ ಮೇಲಣ ವಚನ ಉದ್ಬೋಧಕವಾಗಿದೆ. ಸಂಸಾರ ಸಸಾರವಾಗಲು, ಸುಗಮವಾಗಲು, ಸುಂದರವಾಗಲು ಪ್ರತಿಯೊಬ್ಬ ಮಾನವನು ಪ್ರಯತ್ನಿಸಬೇಕೆಂಬ ಉನ್ನತ ಉದ್ದೇಶ ಆತನದು.

ಅನಂತಾನಂತ ಕಾಲ ನಿತ್ಯವೆಂಬರಿ ಸಂಸಾರ
ಇದು ಹುಸಿ ಕಂಡೆಲವೊ !
ಇಂದಿನಿಂದಿನ ಸುಖವಿಂದಿಂಗೆ ಪರಿಣಾಮ
ದಿನದಿನದ ಸುಖ ಹುಸಿ ಕಂಡೆಲವೊ !
ಘನ ಘನವೆಂಬ ರೂಪಿಂಗೆ ಎರಡಿಲ್ಲಯ್ಯ;
ಮಹಾಲಿಂಗ ಗಜೇಶ್ವರನಲ್ಲಿ ತಿಳಿದು ನೋಡೆಲವೊ.
(ಪು. ೨೭ ವ. ೫೨)

**ಗಜೇಶ ಮಸಣಯ್ಯಗಳ ಪುಣ್ಯಸ್ತ್ರೀ :**

ಗಜೇಶ ಮಸಣಯ್ಯಗಳ ಪುಣ್ಯಾಂಗನೆಯುಂ ಶ್ರೇಷ್ಠ ಶಿವಾನುಭವಿ; ಉತ್ತಮ ವಚನಕಾರ್ತಿ. ಅವಳ ಹೆಸರು ಮಾತ್ರ

ತಿಳಿದುಬಂದಿಲ್ಲ. ಈ ಬಗೆಗೆ ಸಂಶೋಧನೆಯಾಗಬೇಕಿದೆ. ಈಗ ಅವಳ ಒಂಬತ್ತು ವಚನಗಳು ಮಾತ್ರ ಬೆಳಕಿಗೆ ಬಂದಿವೆ. ಅವಳ ವಚನಗಳ ಅಂಕಿತ 'ಮಸಣಯ್ಯಪ್ರಿಯ ಗಜೇಶ್ವರಾ' ಎಂದಿದೆ. ತನ್ನ ಪತಿಯ ಹೆಸರನ್ನೇ ಅಂಕಿತವನ್ನಾಗಿ ಮಾಡಿಕೊಂಡಿದ್ದಾಳೆ. ಈ ವಚನಗಳಲ್ಲಿ ಗುರುವಿನ ಮಹಿಮೆಯನ್ನು ಬಹು ಸೊಗಸಾಗಿ ಪ್ರತಿಪಾದಿಸಲಾಗಿದೆ. ಇವಳ ಕೆಲವು ವಚನಗಳನ್ನು ಪರಿಶೀಲಿಸ ಬಹುದು;

"ಅಂಗದ ಮೇಲಣ ಲಿಂಗವು ಲಿಂಗವಲ್ಲ,
ಮನದ ಮೇಲಣ ಲಿಂಗವು ಲಿಂಗವಲ್ಲ,
ಭಾವದ ಮೇಲಣ ಲಿಂಗವು ಲಿಂಗವಲ್ಲ,
ಅಂಗದ ಮೇಲಣ ಲಿಂಗ ವ್ಯವಹಾರ,
ಮನದ ಮೇಲಣ ಲಿಂಗ ಸಂಕಲ್ಪ,
ಭಾವದ ಮೇಲಣ ಲಿಂಗ ಭ್ರಾಂತುತತ್ವ.
ಆಳಿನ ಆಳು ಅರಸನಪ್ಪನೆ, ಆಳನಾಳುವನರಸಲ್ಲದೆ ?
ಅಂಗ ಪ್ರಾಣ ಭಾವಂಗಳನೊಳಕೊಂಡಿರ್ಪುದೆ ಲಿಂಗ
ಕಾಣಾ, ಮಸಣಯ್ಯಪ್ರಿಯ ಗಜೇಶ್ವರಾ"[೧]

ಲಿಂಗತತ್ತ್ವದ ವಿಚಾರ ಇಲ್ಲಿ ಮೂಡಿಬಂದಿದೆ. 'ಅಂಗ ಪ್ರಾಣ ಭಾವಂಗಳನೊಳಕೊಂಡಿರ್ಪುದೆ ಲಿಂಗ' ಎನ್ನುವ ಮಾತು ಮನೋಜ್ಞ; ಮನೋಹರ. ಆಕೆಯ ಅನುಭವಕ್ಕೆ ಉದಾಹರಣೆ ಅಂಗಗಳೆಲ್ಲವೂ ಲಿಂಗಮಯವಾಗಬೇಕು. ಸರ್ವಾಂಗಗಳು ಲಿಂಗ ಮಯವಾಗಬೇಕೆಂಬ ಭಾವ ಇಲ್ಲಿ ತುಂಬಿಬಂದಿದೆ. ಹಾಗೆಯೇ

---

೧ ಶಿವಶರಣೆಯರ ವಚನಗಳು ಆರ್. ಸಿ. ಹಿರೇಮಠ, ಪುಟ ೩೮೪-೩೮೫.

'ಆಳಿನ ಆಳು ಅರಸನಪ್ಪನೆ ಆಳನಾಳುವನರಸ'ನಲ್ಲದೆ ? ಎಂಬ ಪ್ರಶ್ನೆಯೂ ಕೂಡ ವಿಚಾರಪ್ರಚೋದಕ. ಆಕೆಯ ಸ್ವತಂತ್ರವಾದ ಆಲೋಚನಾ ಶಕ್ತಿ ಇಲ್ಲಿ ವ್ಯಕ್ತವಾಗಿದೆ. ನಿಜವಾದ ಜ್ಞಾನಗಂಗೆಯನ್ನು ಇವಳ ವಚನದಲ್ಲಿ ಕಾಣುತ್ತೇವೆ. 'ಸತಿ-ಪತಿಗಳೊಂದಾದ ಭಕ್ತಿಹಿತವಾಗಿಪ್ಪುದು ಶಿವಂಗೆ' ಎನ್ನುವ ಶರಣವಾಣಿಯನ್ನು ಈ ದಂಪತಿಗಳು ನೆನಪಿಗೆ ತಂದು ಕೊಡುತ್ತಾರೆ. 'ಸಂಸಾರದಿಂದ ಸದ್ಗತಿಯುಂಟು ಕೇಳ್ಮಗನೆ; ಬಸವಾದಿ ಪ್ರಮಥರಿಗೇ ನಿದ್ದಿಲ್ಲವೇ? ಎಂದು ಹಾಡಿಕೊಂಡಿರುವ ಬಾಲಲೀಲಾ ಮಹಾಂತ ಶಿವಯೋಗಿಗಳ ಪದ್ಯದಲ್ಲಿಯಂತೆ 'ಗಜೇಶ ಮಸಣಯ್ಯ' ಸಂಸಾರಿಯಾಗಿದ್ದ; ಪಾರಮಾರ್ಥ ಪಡೆದುಕೊಂಡಿದ್ದ. ಅದು ಹೇಗೆಂಬುದನ್ನು ಈ ವಚನವೇ ತಿಳಿಸಿ ಕೊಡುತ್ತದೆ.

"ಇಂದ್ರಿಯ ನಿಗ್ರಹ ಮಾಡಿದಡೆ ಹೊಂದುವವು ದೋಷಂಗಳು
ಮುಂದೆ ಬಂದು ಕಾಡುವವು ಪಂಚೇಂದ್ರಿಯಗಳು
ಸತಿ-ಪತಿ-ರತಿ ಸುಖ ಬಿಟ್ಟರೆ ಸಿರಿಯಾಳ ಚಂಗಳೆಯರು?
ಸತಿ-ಪತಿ-ರತಿ ಸುಖ ಭೋಗೋಪಭೋಗವ ಬಿಟ್ಟರೇ ಸಿಂಧು ಬಲ್ಲಾಳರು ?
ನಿಮ್ಮ ಮುಟ್ಟಿ ಪರಸ್ತ್ರೀಗೆಳಸಿದಡೆ
ನಿಮ್ಮ ಚರಣಕ್ಕೆ ದೂರ ಕೂಡಲಸಂಗಮದೇವಾ"

ಶರಣರು ಪರಧನ, ಪರಸ್ತ್ರೀಯರಿಂದ ದೂರ ದೂರ ಬಹು ದೂರ. ರಾವಣಾದಿಗಳು ಈ ಮೋಹದ ಪಾಶಕ್ಕೆ ಒಳಗಾಗಿ ಕೆಟ್ಟುಹೋದರೆಂದು ಪುರಾಣಗಳು ಹೇಳುತ್ತವೆ. ಇಂದು ಅನ್ಯಾಯ-ಅತ್ಯಾಚಾರಗಳ ಸ್ವೇಚ್ಛಾಚಾರ ಪ್ರವೃತ್ತಿ ದಿನ-

ಕ್ಕೊಂದು ಚಂದದಂತೆ ಬೆಳೆಯುತ್ತಿದೆ. ಇದಕ್ಕೆ ಸರಿಯಾದ ತಾರಕ ಮಂತ್ರವೆಂದರೆ ಶರಣರ ಸಂದೇಶವನ್ನು ಸಾರುವುದೇ ಆಗಿದೆ. ನೈತಿಕವಾಗಿ ನಮ್ಮ ಜನತೆಯ ಮನಸ್ಸನ್ನು ರೂಪಿಸುವುದರಲ್ಲಿ ಈ ವಚನಗಳು ಅಮೋಘವಾದ ಪಾತ್ರವಹಿಸಬಲ್ಲವು, ಪರಿಣಾಮಕಾರಿ ಪ್ರಭಾವ ಬೀರಬಲ್ಲವು, ಚೆನ್ನಾಗಿ ಅರ್ಥ ಮಾಡಿಕೊಂಡು ನುಡಿದಂತೆ ನಡೆದರೆ ಇದೇ ಜನ್ಮ ಕಡೆಯಾಗಬಲ್ಲದು. ಇದೇ ಜನ್ಮದಲ್ಲಿ ಮುಕ್ತಿ ಪಡೆಯಬಹುದು. ಅಂದು ಅನುಭವ ಮಂಟಪದಲ್ಲಿ ಮಹಿಳೆಯರಿಗೆ ಸ್ವಾತಂತ್ರ್ಯ ದೊರಕಿದ್ದರಿಂದಲೇ ಅವರು ಶರಣರೊಂದಿಗೆ ಸರಿಸಮಾನರಾಗಿ ಸರಿದೊರೆಯಾಗಿ ಕುಳಿತು ತತ್ತ್ವಗಳನ್ನು ಬಿತ್ತರಿಸುವಂತಾಯಿತು. ಸಾಮಾನ್ಯರು ಅಸಮಾನ್ಯರಾದರು, ಕನ್ನಡದ ಕೀರ್ತಿ ಕುಸುಮವನ್ನು, ಅದರ ಪರಿಮಳವನ್ನು ಸುತ್ತಲೂ ಬೀರಿದರು. ಈ ವಚನವಂತೂ ಮಸಣಯ್ಯನ ಪುಣ್ಯಾಂಗನೆಯ ಧೀರೋದಾತ್ತ ದಿಟ್ಟವ್ಯಕ್ತಿತ್ವಕ್ಕೆ ಕನ್ನಡಿಯಾಗಿದೆ. ಸಂಸಾರವನ್ನು ಬಿಟ್ಟು ಏನನ್ನೂ ಸಾಧಿಸಲು ಸಾಧ್ಯವಿಲ್ಲವೆಂಬ ಮಾತನ್ನು ಮನಗಾಣಿಸಿಕೊಟ್ಟಿದ್ದಾಳೆ. ಅವಳ ವ್ಯವಹಾರಿಕ ಜ್ಞಾನವು ಎಷ್ಟೊಂದು ತಿಳಿಯಾಗಿತ್ತು ಎಂಬುದು ಇಲ್ಲಿ ವ್ಯಕ್ತವಾಗಿದೆ. ವೀರಶೈವರದು ನಿವೃತ್ತಿ ಮಾರ್ಗವಲ್ಲ; ಪ್ರವೃತ್ತಿ ಮಾರ್ಗ. ಪಲಾಯನವಾದಿಗಳಲ್ಲ; ಕಾಯಕದಲ್ಲಿಯೇ ಕೈಲಾಸವನ್ನು ಕಾಣುವದಾಗಿದೆ. ಗಡ್ಡಬಿಟ್ಟು ಅರಣ್ಯ ಸೇರುವವಲ್ಲ. ಬಂದ ಕಷ್ಟಗಳನ್ನು ಎದುರಿಸಿ ಶಿವನನ್ನು ಒಲಿಸಿಕೊಂಡು ಸಲ್ಲುವ ಕಾರ್ಯದಲ್ಲಿ ಸದಾನಿರತನಾಗುವದು.

ಈ ವಚನವಂತೂ ಮಾನವೀಯ ಚಿರಂತನ ಮೌಲ್ಯಗಳನ್ನು ಹೊತ್ತು ನಿಂತಿದೆ; ನಿರಂತರ ಸಂದೇಶ ಬೀರುತ್ತಿದೆ.

ವ್ಯಾವಹಾರಿಕ ಜ್ಞಾನದಿಂದ ತುಂಬಿ ನಿಂತಿದೆ. ವೈಚಾರಿಕ ವಿವೇಚನೆಯಿದೆ: ವಿಶ್ಲೇಷಣೆಯಿದೆ. ಅವಳ ಉನ್ನತ ವ್ಯಕ್ತಿತ್ವದ ದರ್ಶನವಿದೆ.

"ಹೊನ್ನ ಬಿಟ್ಟು ಲಿಂಗವನೊಲಿಸಬೇಕೆಂಬರು
ಹೊನ್ನಿಂಗೆಯೂ ಲಿಂಗಕ್ಕೆಯೂ ವಿರುದ್ಧವೆ?
ಹೆಣ್ಣ ಬಿಟ್ಟು ಲಿಂಗನೊಲಿಸಬೇಕೆಂಬರು.
ಹೆಣ್ಣಿಂಗೆಯೂ ಲಿಂಗಕ್ಕೆಯೂ ವಿರುದ್ಧವೆ?
ಮಣ್ಣ ಬಿಟ್ಟು ಲಿಂಗವನೊಲಿಸಬೇಕೆಂಬರು
ಮಣ್ಣಿಂಗೆಯೂ ಲಿಂಗಕ್ಕೆಯೂ ವಿರುದ್ಧವೆ ?
ಅಂಗವ ಬಿಟ್ಟು ಲಿಂಗವನೊಲಿಸಬೇಕೆಂಬರು.
ಅಂಗಕ್ಕೆಯೂ ಲಿಂಗಕ್ಕೆಯೂ ವಿರುದ್ಧವೆ ?
ಇಂದ್ರಿಯಂಗಳ ಬಿಟ್ಟು ಲಿಂಗವನೊಲಿಸಬೇಕೆಂಬರು.
ಇಂದ್ರಿಯಂಗಳಿಗೂ ಲಿಂಗಕ್ಕೆಯೂ ವಿರುದ್ಧವೆ ?
ಜಗವ ಬಿಟ್ಟು ಲಿಂಗವನೊಲಿಸಬೇಕೆಂಬರು.
ಜಗಕ್ಕೆಯೂ ಲಿಂಗಕ್ಕೆಯೂ ವಿರುದ್ಧವೆ ?
ಇದು ಕಾರಣ, ಪರಂಜ್ಯೋತಿ ಪರಮಶಾಂತನೆಂಬ ಲಿಂಗವು
ಕೋಪದ ಮುನಿಸನರಿವಡೆ ಕಾಣಬಹುದು, ಮರೆದಡೆ ಕಾಣಬಾರದು.
ಅರಿವಿಂದ ಕಂಡೊದಗಿದ ಸುಖವು ಮಸಣಯ್ಯಪ್ರಿಯ ಗಜೇಶ್ವರಾ"[1]

ಅಂತೆಯೇ ಇಲ್ಲಿ ವಿವೇಕವಿದೆ: ಅರಿವಿದೆ. ಹೊನ್ನು, ಹೆಣ್ಣು,

೧. ಶಿವಶರಣೆಯರ ವಚನಗಳು : ಪುಟ ೩೮೩-೩೮೪.

ಮಣ್ಣುಗಳು ಸಾಧನೆ ಸಿದ್ಧಿಗೆ ತೊಡಕೆಂದು ಭಾವಿಸಲಾಗದು. ಮನದ ಮುಂದಣ ಆಶೆಯೇ ಮಾಯೆ. ಆ ಮಾಯಾ ಬಂಧನದಿಂದ ಪಾರಾಗಬೇಕಿದೆ. ಹೀಗೆಯೇ 'ಮಣ್ಣು' 'ಅಂಗ' 'ಇಂದ್ರಿಯ' 'ಜಗತ್ತು'ಗಳನ್ನು ಬಿಟ್ಟು ಲಿಂಗವನ್ನು ಒಲಿಸಬೇಕೆಂದು ಅಜ್ಞಾನಿಗಳು ಮಾತ್ರ ಹೇಳುತ್ತಾರೆ. 'ಅರಿವಿಂದ ಕಂಡೊಡವಗಿದ ಸುಖವು' ಎಂಬ ಕೊನೆಯ ಮಾತು ಮನನೀಯವಾಗಿದೆ. ದೃಷ್ಟಿಯಂತೆ ಸೃಷ್ಟಿ. ಮೇಲ್ನೋಟಕ್ಕೆ ಇವು ಸಾಧನೆಗೆ ವಿರೋಧವೆಂದು ತೋರುತ್ತವೆಯೇ ಹೊರತು. ನಿಜವಾಗಿಯೂ ವಿಚಾರ ಮಾಡಿದಾಗ ಆ ಅಡ್ಡಿಯಾಗುವ, ಅಡ್ಡಿಯನ್ನು ತರುತ್ತವೆಂದು ಭ್ರಮಿಸುವ ಸಂಗತಿಗಳೇ ಮನುಷ್ಯನ ಹಿತಕ್ಕೆ ಸಾಧಕವಾಗಿ ಸುಖವನ್ನು ತರುತ್ತವೆ. ಪಾರಮಾರ್ಥ ಸಾಧನೆಗೆ ಲೋಕದಿಂದ ತಪ್ಪಿಸಿಕೊಳ್ಳುವ ಅಗತ್ಯವೇ ಇಲ್ಲ. ಅಂತೆಯೇ. ಆಯ್ದಕ್ಕಿಲಕ್ಕಮ್ಮ- ಮಾರಯ್ಯ. ಮೋಳಿಗೆಯ ಮಹಾದೇವಿ-ಮಾರಯ್ಯ, ರಾಯಸದ ರಾಯಮ್ಮ–ಮಂಚಣ್ಣ, ಕೊಂಡೆಯ ಲಕ್ಷ್ಮಮ್ಮ–ಮಂಚಣ್ಣ, ಹಡಪದ ಲಿಂಗಮ್ಮ–ಅಪ್ಪಣ್ಣ. ಎಡೆಮಠದ ಮಸಣಮ್ಮ–ನಾಗಿದೇವ, ಬಾಚಿಕಾಯಕದ ಕಾಳವ್ವ–ಬಸಪ್ಪ, ರೇಕಮ್ಮ-ರೇವಣಸಿದ್ಧಯ್ಯ, ರೇಚವ್ವೆ-ಕಾಟಕೋಟಯ್ಯ, ಕಾಳವ್ವೆ- ಉರಿಲಿಂಗಪೆದ್ದಿ, ಕೇತಲದೇವಿ–ಗುಂಡಯ್ಯ, ವೀರಮ್ಮ–ವಸರಯ್ಯ. ಗುಡ್ಡವ್ವೆ–ಬತ್ತಲೇಶ್ವರ, ನಾಗಲಾಂಬಿಕೆ–ಶಿವಸ್ವಾಮಿ. ಮೊದಲಾದವರು ಅನುಕೂಲೆಯರಾದ ಪತಿ–ಪತ್ನಿಯರಾಗಿ ಸಂಸಾರ ಮಾಡುತ್ತ ಲಿಂಗಭೋಗೋಪಭೋಗಿಗಳಾಗಿ ಲಿಂಗಾಂಗ ಸಮರಸಿಗಳಾಗಿ ಪರಂಜ್ಯೋತಿಗಳಾಗಿ ಜ್ಞಾನನಂದಾದೀವಿಗೆಗಳಾಗಿ ಬಾಳಿದರು; ಬೆಳಗಿದರು. ಇದು ಸಂಸಾರವನ್ನು ಸಸಾರ ಮಾಡಿಕೊಳ್ಳುವ ರೀತಿ: ನೀತಿ. ಇದು ಸಂಸ್ಕಾರ:

ಸಂಸ್ಕೃತಿ. ಇದು ಶೀಲ ಸಂಪಾದನೆ; ಸಂವರ್ಧನೆ.

'ಗಂಡನ ಮೇಲೆ ಸ್ನೇಹವಿಲ್ಲದ ಹೆಂಡತಿ
ಲಿಂಗದ ಮೇಲೆ ನಿಷ್ಠೆಯಿಲ್ಲದ ಭಕ್ತ.
ಇದ್ದರೇನೋ ಶಿವಶಿವಾ! ಹೋದರೇನೋ ಶಿವಶಿವಾ
ಕೂಡಲಸಂಗಮದೇವ
ಉಡಿದ ಆವಿಂಗೆ ಉಣದೆ ಕರುವ ಬಿಟ್ಟಂತೆ'

ಇದು ವಿಕೃತಿ, ವಿರೋಧ, ವಿಷಮ ಸಂಸಾರದ ಭವಚಕ್ರ. ಇದರಿಂದ ಪಾರಾಗುವದೇ ಮಾನವಜೀವನದ ದಾರಿ. ಇನ್ನೊಂದು ವಚನವನ್ನು ಅವಲೋಕಿಸಬೇಕು. ಅದು ಹೀಗಿದೆ; ಶಿವನೆ, ನೀನು ಗುರುವಾದೆ, ಲಿಂಗವಾದೆ, ಜಂಗಮವಾದೆ ಭಕ್ತನಾದೆ. ಗುರುವಾಗಿದ್ದು ಭಕ್ತನೊಳಡಗಿದೆ, ಅದೇನು ಕಾರಣವೆಂದಡೆ:

ಗುರುವಿಂಗೆ ಅರ್ಥಪ್ರಾಣಾಭಿಮಾನವನು ಕೊಟ್ಟು,
ಆತ ಭೋಗಿಸಿದ ಬಳಿಕ ತಾನಾ ಪ್ರಸಾದ ಮುಂತಾಗಿ ಭೋಗಿಸುವನಾಗಿ
ಆ ಗುರುವು ತನ್ನೊಳಡಗಿದ.
ಲಿಂಗವಾಗಿದ್ದು ಭಕ್ತನೊಳಡಗಿದೆ, ಅದೇನು ಕಾರಣವೆಂದಡೆ;
ಲಿಂಗಕ್ಕೆ ಅರ್ಥಪ್ರಾಣಾಭಿಮಾನವನು ಕೊಟ್ಟು
ತಾನಾ ಪ್ರಸಾದ ಮುಂತಾಗಿ ಭೋಗಿಸುನಾಗಿ
ಆ ಲಿಂಗವು ಭಕ್ತನೊಳಡಗಿದ
ಜಂಗಮವಾಗಿದ್ದು ಭಕ್ತನೊಳಡಗಿದೆ, ಅದೇನು ಕಾರಣವೆಂದಡೆ;
ಜಂಗಮಕ್ಕೆ ಅರ್ಥಪ್ರಾಣಾಭಿಮಾನವನು ಕೊಟ್ಟು

ಆ ಜಂಗಮವು ಭಕ್ತನೊಳಡಗಿದ
ಇಂತಡಗುವರೆ ಹಿರಿಯರು, ಇಂತಡಗುವರೆ ಗುರುವರು
ಇಂತಡಗುವರೆ ಮಹಿಮರು!
ಇವರಿಗೆ ಭಾಜನವೊಂದೆ ಭೋಜನವೊಂದೆ
ಈ ನಾಲ್ಕು ಒಂದಾದ ಘನಕ್ಕೆ ಪರಿಪಮಾಣಬೇಕೆಂಬ
(ಪ್ರಮಾಣ)
ಶಾಸ್ತ್ರದ ಸೂತಕಗಳನೆನಗೆ ತೋರದಿರಯ್ಯಾ
ಮಸಣಯ್ಯಪ್ರಿಯ ಗಜೇಶ್ವರಾ[೧]

ಈಕೆ ಮಹಾನುಭಾವಿ, ದಿವ್ಯಾನುಭಾವಿ ಎಂಬುವಕ್ಕೆ ಈ ವಚನ ಸಾಕ್ಷಿ. ಗುರು–ಶಿಷ್ಯರ ಮಧುರ ಬಾಂಧವ್ಯವನ್ನು ಅತ್ಯಂತ ಮಾರ್ಮಿಕವಾಗಿ ನಿವೇದಿಸಲಾಗಿದೆ. ನಿಜವಾದ ಹಿರಿಯರಾರು? ಮಹಿಮರಾರು ? ಎಂಬುದನ್ನು ಇಲ್ಲಿ ಚೆನ್ನಾಗಿ ಪ್ರತಿಪಾದಿಸಲಾಗಿದೆ. ಶರಣ–ಶರಣೆಯರಿಗೆ ಅನುಭವವೇ ಪ್ರಮಾಣ. ಶಾಸ್ತ್ರಗಳ ಆಧಾರ ಬೇಕಿಲ್ಲವೆಂಬ ಮಾತು ಇಲ್ಲಿ ಬಂದಿರುವುದು ಗಮನಿಸಬೇಕಾದ ಅಂಶ.

ಇನ್ನೊಂದು ವಚನವು ಗುರು–ಶಿಷ್ಯರ ಸಾಮರಸ್ಯಕ್ಕೆ ಹಿಡಿದ ಕನ್ನಡಿಯಾಗಿದೆ.

'ಎನ್ನನರಿಯಿಸದಿರುವೆ, ಎನ್ನನರಿಯಿಸು; ನಿನ್ನನರಿಯಿಸಬೇಡ
ಎನ್ನನರಿಯದವ ನಿನ್ನನರಿಯ,
ಎನ್ನನರಿಯಿಸದೆ ನಿನ್ನನರಿಯಿಸಿದಡೆ

---

೧. ಶಿವಶರಣೆಯರ ವಚನಗಳು ; ಸಂ. ಡಾ. ಆರ್. ಸಿ. ಹಿರೇಮಠ, ಪುಟ ೨೮೫, ವ. ೯

ನೀನೆನಗೆ ಗುರುವಲ್ಲ; ನಾ ನಿನಗೆ ಶಿಷ್ಯನಲ್ಲ,
ಎನ್ನನರಿಯಿಸದಡೆ ನೀನೆನಗೆ ಗುರು; ನಾನಿನಗೆ ಶಿಷ್ಯ.
ಮಸಣಯ್ಯಪ್ರಿಯ ಗಜೇಶ್ವರಾ.[೧]

ಹೀಗೆ ತನ್ನ ಸ್ವತಂತ್ರವಾದ ಧೀಮಂತವಾದ ವಿಚಾರ ದಿಂದ ಗಜೇಶ ಮಸಣಯ್ಯನ ಕೀರ್ತಿಗೆ ಮುಕುಟವನ್ನಿಟ್ಟಿದ್ದಾಳೆ. ಶಿವಾನುಭವದ ಅಮೃತವನ್ನು ಉಣಬಡಿಸಿದ್ದಾಳೆ; ನಿಜತತ್ವ ಗಳನ್ನು ಬೀರಿದ್ದಾಳೆ. ಗುರುವಿನ ಕಾರುಣ್ಯಶಿಶುವಾಗಿ, ಪತಿಯ ಪ್ರೇಮದ ಪುತ್ಥಳಿಯಾಗಿ ಸಂಸಾರದಿಂದಲೇ ಸದ್ಗತಿ ಪಡೆದ ಸಂಸ್ಕೃತಿಯ ಪರಿಮಳ ಸೂಸಿದ ಶರಣೆ, ಪ್ರಜ್ಞಾವಂತ ಶರಣೆ. ಇನ್ನೂ ಈಕೆಯ ಬಗೆಗೆ ಹೆಚ್ಚಿಗೆ ಸಂಶೋಧನೆ ನಡೆಯಬೇಕಿದೆ. ಈಕೆಯ ಹೆಚ್ಚಿನ ವಚನಗಳು ದೊರೆಯುವ ಸಂಭವವಿಲ್ಲದಿಲ್ಲ. ಸಿಕ್ಕ ವಚನಗಳು ಮುತ್ತಾಗಿವೆ. ಬಾಳಿಗೆ ಬೆಳಕು ಬೀರುತ್ತವೆ. ವೀರಶೈವ ಸಿದ್ಧಾಂತವನ್ನು ಬೋಧಿಸಿವೆ. ಷಟ್‌ಸ್ಥಲ ಮಾರ್ಗ ವನ್ನು ಬಿಡಿಸಿವೆ.

ಇನ್ನೊಂದು ಮುತ್ತಿನಂತಹ ವಚನವಿದು. ಸೃಷ್ಟಿತತ್ವ ವನ್ನು ಅದೆಂತು ಸಹಜವಾಗಿ ವಿವರಿಸಿದ್ದಾರೆ; ನೋಡಿ ಅವರ ಅನುಭವ ಇಲ್ಲಿ ಮಡುಗಟ್ಟಿದೆ.

"ಪರದಿಂದಲಾಯಿತು (ಪರ) ಶಕ್ತಿ
ಪರಶಕ್ತಿಯಿಂದಲೊದಗಿದ ಭೂತಗಳು
ಭೂತಂಗಳಿಂದಲೊದಗಿದ ಲಿಂಗ

---

೧. ಶಿವಶರಣೆಯರ ವಚನಗಳು ; ಸಂ. ಡಾ. ಆರ್. ಸಿ. ಹಿರೇಮಠ ಪು. ೩೮೪, ವ. ೬

ಲಿಂಗಕ್ಕಾವ ಕರಣೇಂದ್ರಿಯಂಗಳು
ಇಂದ್ರಿಯಂಗಳಿಂದಲೊದಗಿದ ವಿಷಯಂಗಳು
ಆ ವಿಷಯಂಗಳ ಪರಮುಖಕ್ಕೆ ತಾ ಶಕ್ತಯಾಗಿ
ಭೋಗಿಸಬಲ್ಲಡೆ
ಆತ ನಿರ್ಲೇಪ ಮಸಣಯ್ಯಪ್ರಿಯ ಗಜೆ ಶ್ವರಾ"

ಮಾನವನಾಗಿ ಜನ್ಮತಾಳುವದೇ ಪುಣ್ಯಮಯ. ಹಾಗೆ ಜನ್ಮವೆತ್ತಿ ಬಂದ ಮೇಲೆ ನಿಜಮಾನವನಾಗಿ ಬಾಳಬೇಕು; ಬೆಳೆಯಬೇಕು. ಅದನ್ನು ಪ್ರಸಾದಕಾಯವನ್ನಾಗಿ ಮಾರ್ಪಡಿಸಿ ಕೊಳ್ಳಬೇಕು. ಈ ಬಗೆಯ ಅಮೂಲ್ಯ ವಿಚಾರ ಸರಣಿ ಈ ವಚನವಲ್ಲಿದೆ. 'ಹೀಗೆ ದೇವನೊಲಿಸ ಬಂದ ಪ್ರಸಾದಕಾಯ', "ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ" ಎಂಬಂತೆ ದಂಪತಿಗಳು ಸಂಸಾರವನ್ನು ಸಸಾರ ಮಾಡಿಕೊಳ್ಳ ಬೇಕು. ಪಾರಮಾರ್ಥದ ಕಡೆಗೆ ಪ್ರಗತಿ ಪಥದ ಹೆಜ್ಜೆಯನ್ನು ಇಡಬೇಕು. ಈ ಅನುಭವಗಳನ್ನೇ ಮಾನವ ಜನಾಂಗದ ಉದ್ಧಾ ರಕ್ಕಾಗಿ ವಚನ ವಾಙ್ಮಯದ ಮೂಲಕ ಬಿತ್ತರಿಸಿದ್ದಾಳೆ; ನಮಗಾಗಿ ಬಿಟ್ಟು ಹೋಗಿದ್ದಾಳೆ. ವೀರಶೈವ ಸಿದ್ಧಾಂತವನ್ನು ಸುಲಭವಾಗಿ ಸರಳವಾಗಿ ವಿವರಿಸಿದ್ದಾಳೆ. 'ಲಿಂಗಾಂಗ ಯೋಗ'ದ ಲಕ್ಷಣಗಳನ್ನು ವರ್ಣಿಸಿದ್ದಾಳೆ; ಓದುಗರ ಆತ್ಮಶ್ರೀಯನ್ನು ಅರಳಿಸಿದ್ದಾಳೆ.

## ಸಂಗೀತ ಶಾಸ್ತ್ರಜ್ಞ

ಗಜೇಶ ಮಸಣಯ್ಯ ಸಂಗೀತಶಾಸ್ತ್ರದಲ್ಲಿಯೂ ಪ್ರವೀಣ. ಈ ಮಾತಿಗೆ ಕೆಳಗಿನ ವಚನವೇ ನಿದರ್ಶನ :

"ದೇಶಾಕ್ಷಿಯಿಲ್ಲದ ರಾಗ, ಉಪ್ಪಿಲ್ಲದ ಊಟ ಸಪ್ಪೆ
ಕಾಣಿರೋ,

ಅಯ್ಯಾ, ಮಿಕ್ಕಿನರಾಗ, ಶಿವನಲ್ಲದೆ ದೈವ ಫಲವಿಲ್ಲ
ಕಾಣಿರೋ,
ಅಯ್ಯಾ, ಮಿಕ್ಕಿನ ತುಂಬುರ ನಾರದರು ಶಿವನ
ಕೇಳಿಸುವ ರಾಗ
ಮಹಾಲಿಂಗ ಗಜೇಶ್ವರನ ನೆಚ್ಚಿನ ರಾಗ ಕಾಣಿರೊ."

ದೇಶಾಕ್ಷಿ ರಾಗವೆಂದರೆ ಗಜೇಶ ಮಸಣಯ್ಯನಿಗೆ ಪಂಚಪ್ರಾಣ; ಅದು ಅವನಿಗೆ ಅಚ್ಚು ಮೆಚ್ಚಿನ ರಾಗವಾಗಿತ್ತೆಂದು ತೋರುತ್ತದೆ. ಶಿವನ ಒಲವನ್ನು, ಬಲವನ್ನು ಗಳಿಸಲು ಇದೊಂದು ಸಹಜ, ಸುಲಭವಾದ ದಾರಿಯಾಗಿತ್ತು. ಕುಂಬಾರ ಗುಂಡಯ್ಯ ಕುಣಿ ಕುಣಿದು ದೇವಸಾಕ್ಷಾತ್ಕಾರ ಪಡೆದುಕೊಂಡಂತೆ, ಗಜೇಶ ಮಸಣಯ್ಯ ಹಾಡಿ ಹಾಡಿ ಶಿವನ ಕರುಣೆಗೆ ಪಾತ್ರನಾಗಿದ್ದ. ಹನ್ನೆರಡನೆಯ ಶತಮಾನದಲ್ಲಿಯೇ ಸಾಹಿತ್ಯದೊಡನೆ ಸಂಗೀತವು ಸಂಗಮವಾಗಿತ್ತು ಎಂಬ ವಿಚಾರವು ಇಲ್ಲಿ ಮನನೀಯ. ಅಂತೆಯೇ ಗಜೇಶ ಮಸಣಯ್ಯನ ವಚನಗಳನ್ನು ರಾಗ ತಾಳ ಲಯದೊಡನೆ ಸಂಗೀತಗಾರರು ಹಾಡಿ ನಲಿಯಬಹುದು: ಆತನ ವಚನಗಳನ್ನು ಪ್ರಸಾರ ಮಾಡಬಹುದು. ನಮ್ಮ ಸಂಗೀತಜ್ಞರು ಈ ಕಡೆಗೂ ಗಮನ ಕೊಡಬೇಕಾಗಿದೆ. ಅಜ್ಞಾತ ವಚನಕಾರರನ್ನು ಬೆಳಕಿಗೆ ತರುವುದರಲ್ಲಿ ನಮ್ಮ ಪಾಲಿನ ಕರ್ತವ್ಯವನ್ನು ಮಾಡಬಹುದು. ಇಂದು ಬಸವಣ್ಣ, ಅಕ್ಕಮಹಾದೇವಿ, ಪ್ರಭುದೇವರ ವಚನಗಳನ್ನು ಜನಪ್ರಿಯಗೊಳಿಸಿದಂತೆ, ಅಷ್ಟೇ ಉನ್ನತ ಭಾವಗಳುಳ್ಳ ಗಜೇಶ ಮಸಣಯ್ಯನಂತಹ ವಚನಕಾರರ ವಚನಗಳನ್ನು ಸರಿಯಾದ ರಾಗ–ತಾಳ ಕೂಡಿಸಿ ಹಾಡಿದರೆ, ಕೇಳುಗರಿಗೂ ಹೊಸ ಅಭಿರುಚಿ, ಆಸಕ್ತಿ ಮೂಡಲವಕಾಶವಿದೆ.

"ಬೆರೆಯಬಾರದೆ ತಿಳಿದು । ಬೆರೆಯಬಾರದೆ ಮರೆದು
ಬಾಹ್ಯವನ್ನು ತನ್ನ। ಕರವಖಂಡ ತೇಜದೊಡನೆ

## ಶೈಲಿ

"ತತ್ವವನ್ನು ಬಿತ್ತರಿಸಲು, ನೀತಿಯನ್ನು ತಿಳಿಸಲು, ಭಾವವನ್ನು ಅಭಿವ್ಯಕ್ತಗೊಳಿಸಲು ವಚನಗಳ ಶೈಲಿ ಸಮರ್ಪಕ ಮಾದುದು. ಪದ್ಯ ದೂರಾನ್ವಯದ ಸಾಗರ, ಗದ್ಯ ವರ್ಣನಾ ನಿರ್ಣಯದ ಆಗರ. ಆದ್ದರಿಂದಲೇ ಶರಣರು ಪದ್ಯವೂ ಅಲ್ಲದ, ಗದ್ಯವೂ ಅಲ್ಲದ ಒಂದು ಸುವರ್ಣಮಾರ್ಗವನ್ನು ಅನುಸರಿಸಿ ವಚನ ಶೈಲಿಯನ್ನು ಕಂಡುಹಿಡಿದರು. ಗದ್ಯದ ಸೊಬಗಿನಲ್ಲಿ ಪದ್ಯದ ಲಯವನ್ನು ಅಳವಡಿಸಿಕೊಂಡುದೇ ವಚನವೆನಿಸಿತು. ಶೀಲವಂತೆ ಶೈಲಿ ಎನ್ನುವ ಮಾತೊಂದಿದೆ. ಶೀಲ ವ್ಯಕ್ತಿಯ ಕುರುಹು; ಆ ವ್ಯಕ್ತಿಯ ಶೈಲಿ ಅವನ ಶೀಲದ ಅರಿವು. ಹೀಗಾಗಿ ಶೀಲಕ್ಕನುಗುಣವಾದ ಶೈಲಿ, ತತ್ವಕ್ಕನುಗುಣವಾದ ತಂತ್ರ ವಚನಗಳಲ್ಲಿರುವವನ್ನು ಕಾಣುತ್ತೇವೆ. ವಚನಶೈಲಿ ಕನ್ನಡದ್ದೇ ಆದ ವಿಶಿಷ್ಟ ಶೈಲಿ, ವಿನೂತನ ಶೈಲಿ. ಕನ್ನಡಕ್ಕೆ ಕೀರ್ತಿ ತಂದ ದೇಸೀಯ ಶೈಲಿ".[೧] ಭಾಷೆಯ ಬಳಕೆಯಲ್ಲಿ ಸರಳತೆ, ಮಿತಮಿತ ಗುಣ, ಔಚಿತ್ಯಪ್ರಜ್ಞೆ ಇವು ಈತನ ವಚನಗಳ ಮುಖ್ಯ ಲಕ್ಷಣಗಳಾಗಿವೆ. "ಭಾವ–ಭಾಷೆಗಳ ಸೌಂದರ್ಯದಲ್ಲಿ ಅಕ್ಕಮಹಾದೇವಿಯ ವಚನಗಳಿಗೆ ಹೊಯಿಕೈಯಾಗಿ ನಿಲ್ಲಬಲ್ಲ ವಚನಗಳನ್ನು ನೀಡಿರುವ ಮಹಾತ್ಮನೀತ. ಅಕ್ಕಮಹಾದೇವಿ ಎಷ್ಟೆಂದರೂ ಹೆಣ್ಣಾಗಿ ಹುಟ್ಟಿದಾಕೆ. ಸತಿ–ಪತಿ ಸುಕುಮಾರ ಭಾವನೆ ಆಕೆಗೆ ಸಹಜವಾದುದು. ಆದರೆ ಗಂಡಾಗಿ ಹುಟ್ಟಿದ ಗಜೇಶ ಮಸಣಯ್ಯ ಈ ಭಾವದಲ್ಲಿ ಆಕೆಯ ಎತ್ತರಕ್ಕೆ ಏರಿರುವುದು ಕೌತುಕಗಳಲ್ಲಿ ಕೌತುಕ ಅವನ ಇನ್ನಷ್ಟು ವಚನಗಳು ಉಪಲಬ್ಧವಾದರೆ

---

೧. ಪ್ರಸ್ತಾವನೆ : ಸಕಲಪುರಾತನರ ಬೆಡಗಿನ ವಚನಗಳು ;
ಸಂ. ಎಮ್. ಎಸ್. ಸುಂಕಾಪುರ.

ಭಾವಗೀತೆಗಳ ಯಾವ ಕವಿಗೂ ಅವನು ಸರಿಸಮಾನನಾಗಿ ನಿಲ್ಲುತ್ತಾನೆ."[೧] ಇವನ ವಚನಗಳು ಉರಿಲಿಂಗದೇವರ ವಚನಗಳಂತೆ ಭಾವೋದ್ರಿಕ್ತವಾಗಿವೆ ಮತ್ತು ಬಹುಶಃ ಹೆಚ್ಚು ಸೂಕ್ಷ್ಮವಾಗಿವೆ. ಇವನಲ್ಲಿ ಬರುವ ಸುಕುಮಾರ ಪ್ರತಿಮೆಗಳು, ಅತಿಯಿಲ್ಲದ ಶೃಂಗಾರ, ಕಡಿಮೆ ಮಾತುಗಳು, ಪ್ರಾಮಾಣಿಕ ಸಂವೇದನೆ ಇವುಗಳಿಂದಾಗಿ ಉರಿಲಿಂಗದೇವ ಮತ್ತು ಗಜೇಶ ಮಸಣಯ್ಯರು ವಚನ ವಾಙ್ಮಯ ಗಗನದ ಯಮಳ ನಕ್ಷತ್ರಗಳಾಗಿ ಕಂಗೊಳಿಸುತ್ತಿದ್ದಾರೆ.'[೨] ಈ ವಿಮರ್ಶಕ ತಜ್ಞರ ಅಭಿಪ್ರಾಯಗಳು ಈ ವಚನಗಳ ಶೈಲಿಯನ್ನು ಚೆನ್ನಾಗಿ ವ್ಯಕ್ತ ಮಾಡಿವೆ. ಇವುಗಳನ್ನು ಯಾರಾದರೂ ಮೆಚ್ಚಲಿ, ಹೊಗಳಲಿ, ಬಿರುದು-ಬಾವಲಿಗಳು ಬರಲಿ ಎಂಬ ಆಶೆಯಿಂದ ಬರೆದವುಗಳಲ್ಲ, ಯಾವ ರಾಜನನ್ನಾಗಲಿ,ಪಂಡಿತರನ್ನಾಗಲಿ ಮೆಚ್ಚಿಸಲೂ ಅಲ್ಲ. ತಮ್ಮ ಪ್ರತಿಭೆ, ಪಾಂಡಿತ್ಯ, ಪ್ರತಿಷ್ಠೆಗಳ ಪ್ರದರ್ಶನಕ್ಕಾಗಿಯೂ ಅಲ್ಲ. ಸಾರ್ಥಕ ಬದುಕಿನ ಬೆಲೆಯನ್ನು ಅರುಹಿದ ಮುತ್ತಿನಂತಹ ವಚನಗಳು. ಮರ್ತ್ಯರ ಮನದ ಮೈಲಿಗೆಯನ್ನು ಕಳೆಯಲು ಮೂಡಿ ಬಂದ ಚಿನ್ಮಯ ಸಾಹಿತ್ಯ. ಇವುಗಳಲ್ಲಿ ವಿಶ್ವದ ಮನ್ನಣೆ ಪಡೆಯಬಲ್ಲ ಮಾನವೀಯ ಚಿರಂತನ ಮೌಲ್ಯಗಳಿವೆ; ತತ್ವದರ್ಶನವಿದೆ. ಈ ದಿಶೆಯಲ್ಲಿ "ಇವರ ಎಲ್ಲ ವಚನಗಳಲ್ಲಿ ಕಾವ್ಯತ್ವವನ್ನು ಹುಡುಕುವದು; ಅದರ ಮೇಲಿಂದ ಬೆಲೆಕಟ್ಟುವದು ಅವರಿಗೆ ಅನ್ಯಾಯ ಮಾಡಿದಂತೆ. ಅವರ ವಚನಗಳಲ್ಲಿ ಕಾವ್ಯವಿದೆ ನಿಜ. ಆದರೆ ವಚನಗಳಲ್ಲಿ ಅದಕ್ಕಿಂತ ಹೆಚ್ಚಾಗಿ

---

೧. ಶರಣಚರಿತಾಮೃತ—ಸಿದ್ಧಯ್ಯ ಪುರಾಣಿಕ, ಪುಟ ೪೪೧

೨. ವಚನ ಸಾಹಿತ್ಯ—ಡಾ. ಎಂ. ಚಿದಾನಂದಮೂರ್ತಿ, ಪು. ೧೧೨-೧೧೩.

ಜೀವವಿದೆ, ಜೀವನವಿದೆ ವಿಮರ್ಶೆಯಿದೆ"[1] ಎಂಬ ಮಾತನ್ನು ಅವಶ್ಯವಾಗಿ ಅವಲೋಕಿಸಬೇಕು.

## ಸೂಳ್ನುಡಿಗಳು

ಗಜೇಶ ಮಸಣಯ್ಯನ ವಚನಗಳಲ್ಲಿ ಗಾದೆಯ ಮಾತಿನಂತಿರುವ ಕೆಲವು ಸೂಳ್ನುಡಿಗಳು ಸೂತ್ರರೂಪವಾಗಿವೆ. ಮಸಣಯ್ಯನ ಲೋಕಾನುಭವ; ಶಿವಾನುಭವಗಳ ಅಪಾರ ಅನುಭವದ ಅಮೃತ ರಸಪಾಕದಂತಿವೆ. 'ಕರಿಯನಿತ್ತಡೆ ಒಲ್ಲೆ, ಸಿರಿಯನಿತ್ತಡೆ ಒಲ್ಲೆ, ಹಿರಿದಪ್ಪ ರಾಜ್ಯವಿತ್ತಡೆ ಒಲ್ಲೆ, ನಿಮ್ಮ ಶರಣರ ಸೂಳ್ನುಡಿಯ ಒಂದರಗಳಿಗೆ ಇತ್ತಡೆ, ನಿಮ್ಮನಿತ್ತ ಕಾಣಾ ರಾಮನಾಥಾ' ಎಂಬ ದೇವರದಾಸಿಮಯ್ಯನವರ ವಚನವನ್ನು ಸ್ಮರಿಸಿಕೊಳ್ಳಬೇಕು. ಇವು ಮೊಗೆದಷ್ಟೂ ಜ್ಞಾನಜಲವನ್ನು ಕೊಡುವ ಬತ್ತದ ಒರತೆಗಳಂತಿವೆ.

೧. ಉಪ್ಪಿಲ್ಲದ ಊಟ ಸಪ್ಪೆ ಕಾಣಿರೊ

೨. ತನು-ಮನ-ಧನದ ಭಂಗವಳಿಯದೆ ನೆರೆಯನವ್ವಾ

೩. ದೇವರ ನೆನೆದು ಯುಕ್ತರಾದೆವೆಂಬ
ಯುಕ್ತಿ ಶೂನ್ಯರ ಮಾತು ಕೇಳಲಾಗದು.

೪. ಮುನಿಸ ಮುನಿದಡೆ ಶ್ರೀಗಂಧದ
ಮುರುಡಿನ ಹಾಂಗಿರಬೇಕವ್ವಾ.

೫. ಕಾಮಂಗಂಜಿ ಚಂದ್ರಮನ ಮರೆಹೋಗಲು
ರಾಹು ಕೊಂಡಂತಾದಳವ್ವೆ.

---

೧. ವಚನ ಸಾಹಿತ್ಯ—ಡಾ. ಎಂ. ಚಿದಾನಂದಮೂರ್ತಿ, ಪುಟ ೧೩೧

೬. ಪರಿಮಳವಿಲ್ಲದ ಪುಷ್ಪದಂತಾದೆ ನೋಡವ್ವ.
ಚಂದ್ರಮನಿಲ್ಲದ ನಕ್ಷತ್ರದಂತಾದೆ ನೋಡವ್ವ.

೭. ಹಾಂತಗಿಯ ಹೊಳೆಯಲ್ಲಿ ಉತ್ತಮನ ನೆಳಲು
ಸುಳಿದಡೆ ರೂಹು ಹೊಲೆಯನಾಗಬಲ್ಲುದೆ ಅಯ್ಯಾ ?
ಮರ್ತ್ಯಲೋಕದ ಮಾನವರೊಳಗೆ ಸುಳಿದಡೆ,
**ಶರಣ ಸಂಗತಿಯಾಗಬಲ್ಲನೆ ಅಯ್ಯಾ ?**

೮. ನೇಹದ ಮುತ್ತು ಅಧರವ ತುಂಬಿತ್ತು.

೯. ಇದ್ದಿಲ ಹಿಂಡಿದಡೆ ರಸವುಂಟೆ ?

೧೦. ಮಹಾಲಿಂಗ ಗಜೇಶ್ವರಯ್ಯನೊಬ್ಬನೆ ಶಾಶ್ವತನು.

೧೧. ಎನಗೆ ನಿಮ್ಮ ತೊತ್ತುತನವೇ ಸಾಕು.

೧೨. ಲಿಂಗ ಬಾರಯ್ಯ, ಎನ್ನದೇವ ಬಾರಯ್ಯ
ಎನ್ನಂತರಂಗದ ಪರಂಜ್ಯೋತಿ ಬಾರಯ್ಯ.

೧೩. 'ಸ್ವಯಮಾತ್ಮ ಪರೋಲಿಂಗ'ವೆಂದುಲಿವ
ಬೀದಿಯ ಭಂಡರ ಮಾತ ಕೇಳಲಾಗದು.

೧೪. ಗುರುವನರಿಯಬಲ್ಲ ಶಿಷ್ಯ, ಶಿಷ್ಯನನರಿಯಬಲ್ಲ ಗುರು
ಇವರಿಬ್ಬರ ಭೇದವ ನೀನು ಬಲ್ಲೆ ಗಜೇಶ್ವರಾ.

೧೫. ಉರಗನ ಬಾಯ ಕಪ್ಪೆಯಂತೆ ಸಂಸಾರ.

## ಉಪಮೆಗಳು

ಶರಣರ ಅನುಭವದ ಜೀವಂತತೆಗೆ, ಸಹಜತೆಗೆ ಸೌಂದರ್ಯಕ್ಕೆ ಮಾಸಣಯ್ಯನವರ ಉಪಮೆ, ಅಲಂಕಾರಗಳು ಅಪ್ರತಿಮ ನಿದರ್ಶನಗಳಾಗಿವೆ :

೧. ಇಂದುವಿನಲ್ಲಿ ಉದಯವಾದ ವಾರಿಕಲ್ಲಿನಂತೆ

೨. ಋತುಕಾಲ ತಪ್ಪಿದ ಕೋಗಿಲೆಯಂತೆ
ನುಡಿಯದಂತಿರ್ದಳಲ್ಲಾ !
೩. ಮೂಗಕಂಡ ಕನಸಿನಂತೆ, ಮೈಯರಿಯದ ನೆಳಲಿನಂತೆ
೪. ಮಾಘಮಾಸದ ನವಿಲಿನಂತಾದೆ ನೋಡವ್ವಾ
ಇರುಳು ತೊಳಲುವ ಜಕ್ಕವಕ್ಕಿಯಂತೆ
ಹಲವ ಹಲಬುತಿರ್ದೆ ನೋಡವ್ವಾ.
೫. ಕೋಗಿಲೆಗಳು ಹಳವಟ್ಟುಹೋದ ಬನದಂತಾದೆ
ನೋಡವ್ವಾ
ರಾಮುರಾಡಿದ ಹೊಳಲಿನಂತಾದೆ ನೋಡವ್ವಾ.
೬. ಉರಗನ ಬಾಯಕಪ್ಪೆಯಂತೆ; ಸಂಸಾರ
ಹೆರೆಗೊಳುತ್ತಿರ್ದುದಲ್ಲಾ!

## ಶಬ್ದಾಲಂಕಾರ

೧. ಮನದ ಮರದ ಮದಾಳಿಯ ನೇಹದಂತಾದೆನವ್ವಾ.
೨. ಪರಿಮಳವಿಲ್ಲದ ಪುಷ್ಪ......
೩. ರಸದ ರುದ್ರಾಕ್ಷಿ......
೪. ಮೂಗಿಯ ಕೋಗಿಲೆಯಂತೆ ಮೂಗನಾಗಿರ್ದೆನವ್ವಾ.
೫. ಕಂಗಳ ಕಾಳಗ......
೬. ಮಿಂಚಿನ ಗೊಂಚಲು.
೭. ಮುನಿಸ ಮುನಿದಡೆ......
೮. ಸೊಂಕಿದಡೆ ಸುಖಿಯಾದೆ.
೯. ಪರಮ ಪದವಿಯ ನಿಮ್ಮ ಕೊರಳಲ್ಲಿ ಕಟ್ಟಿಕೊಳ್ಳಿ.
ಪರಮ ಪದವಿಯ ನಿಮ್ಮ ತಲೆಯಲ್ಲಿ ಹೊತ್ತುಕೊಳ್ಳಿ.

# ಉಪನ್ಯಾಸ ಗ್ರಂಥಮಾಲೆಯ
## ಕೆಲವು ಪ್ರಕಟನೆಗಳು

---

೧. ಅನುಭವ ಮಂಟಪದ ಶಿವಶರಣೆಯರು

—ಶಶಿಕಲಾ ಮೋಳ್ಳಿ

೨. ಮೈಲಾರ ಬಸವಲಿಂಗ ಶರಣರು

—ದೇವೇಂದ್ರಕುಮಾರ ಹಕಾರಿ

೩. ಶ್ರೀ ನಿಜಗುಣ ಶಿವಯೋಗಿಗಳ ಭಕ್ತಿ, ಜ್ಞಾನ, ವೈರಾಗ್ಯ

—ಪಿ. ಎಂ. ಸಿದ್ಧಯ್ಯ

೪. ಹರಿಹರನ ಮೂರು ರಗಳೆಗಳು

—ಎಂ. ಎಸ್. ಲಠ್ಠೆ

೫. ವಚನಕಾರ ಮಡಿವಾಳ ಮಾಚಿದೇವರು

—ಎಸ್. ಕೆ. ಕೊಪ್ಪಾ

೬. ವಚನಕಾರ ದೇವರದಾಸಿಮಯ್ಯ

—ಎಸ್. ಎಸ್. ಬಾಣದ

೭. ಲಕ್ಕಣ್ಣ ದಂಡೇಶ

—ವ್ಹಿ. ಶಿವಾನಂದ

೮. ಅಕ್ಕಮಹಾದೇವಿ ಮತ್ತು ಮೀರಾಬಾಯಿ

—ಎಸ್. ಎಸ್. ಕಬ್ಬಿನ

೯. ನಾಲತ್ತವಾಡದ ವೀರೇಶ ಶರಣರು

—ಬ. ವೀ. ಹಂಪನಗೌಡ್ರ

೧೦. ಢಕ್ಕೆಯ ಬೊಮ್ಮಣ್ಣ

—ಎಚ್. ಎಸ್. ಮುಕ್ತಾಯಕ್ಕ

---

ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ